KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೬ | ಬೆಂಗಳೂರು, ಗುರುವಾರ, ಜನವರಿ ೬, ೨೦೧೧, (ಪುಷ್ಯ ೧೬, ಶಕ ವರ್ಷ ೧೯೩೨) | ಸಂಚಿಕೆ ೧ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ವಸತಿ ಸಚಿವಾಲಯ

**ವಿಷಯ :** ಹುಡ್ಕೋ ಸಂಸ್ಥೆಗೆ, ಪೌರಾಡಳಿತ ನಿರ್ದೇಶನಾಲಯದಿಂದ IPLCS ಸಾಲದ ಬಾಕಿ ಸಂಬಂಧ ದಂಡ ಬಡ್ಡಿಯ ಮೊತ್ತ ರೂ. 68.00 ಲಕ್ಷಗಳನ್ನು ಲೆಕ್ಕ ಶೀರ್ಷಿಕೆ 4217–60–800–3–01 ರಡಿ ಲಭ್ಯವಿರುವ ರೂ. 28.00 ಕೋಟಿಗಳಲ್ಲಿ ಪಾವತಿಸುವುದಕ್ಕೆ ಸಂಬಂಧಿಸಿದಂತೆ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :** 1) ನಗರಾಭಿವೃದ್ಧಿ ಇಲಾಖೆಯ ಕಡತದ ಟಿಪ್ಪಣಿ ನಂ. ನಅಇ 108 ಜಿಇಎಲ್ 2008

2) ಆರ್ಥಿಕ ಇಲಾಖೆಯ ಹಿಂಬರಹ ಸಂಖ್ಯೆ: FD 489 Exp-9/2010, ದಿನಾಂಕ: 04–08–2010

**ಪ್ರಸ್ತಾವನೆ :**

ನಗರಾಭಿವೃದ್ಧಿ ಇಲಾಖೆಯು ವಸತಿ ಇಲಾಖೆಗೆ ಕಳುಹಿಸಿದ ಮೇಲೆ ಓದಲಾದ ಕ್ರ.ಸಂ.(1)ರ ಕಡತದಲ್ಲಿ, ಪೌರಾಡಳಿತ ನಿರ್ದೇಶನಾಲಯವು ನಗರಾಭಿವೃದ್ಧಿ ಇಲಾಖೆಯನ್ನು ನಗರ ಸ್ಥಳೀಯ ಸಂಸ್ಥೆಯ ವ್ಯಾಪ್ತಿಯಲ್ಲಿ ಸಮಗ್ರ ಕಡಿಮೆ ವೆಚ್ಚದ ಶೌಚಾಲಯ **(IPLCS)** ನಿರ್ಮಾಣ ಮಾಡುವ ಸಲುವಾಗಿ ಪಡೆದಿದ್ದ ಸಾಲದ ಬಾಕಿ ಸಂಬಂಧ ಅಸಲು, ಬಡ್ಡಿ ಪೀನಲ್ ಬಡ್ಡಿ ಸೇರಿ 30/6/10ರ ಅಂತ್ಯಕ್ಕೆ ರೂ.68.00 ಲಕ್ಷಗಳನ್ನು ಹುಡ್ಕೋ ಸಂಸ್ಥೆಗೆ ಪಾವತಿಸಲು ಕೋರಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಹಿಂಬರಹದಲ್ಲಿ ಆರ್ಥಿಕ ಇಲಾಖೆಯು ನಗರಾಭಿವೃದ್ಧಿ ಇಲಾಖೆಯ ಪ್ರಸ್ತಾವನೆಯನ್ನು ಪರಿಶೀಲಿಸಿ, ಹುಡ್ಕೋ ಸಾಲಗಳ ಮೇಲು ಉಸ್ತುವಾರಿಗಾಗಿ ಲೆಕ್ಕಶೀರ್ಷಿಕೆ 4217–60–800–3–01 (ಯೋಜನೇತರ) ರಡಿ 2010–11ನೇ ಸಾಲಿನಲ್ಲಿ ಲಭ್ಯವಿರುವ ರೂ. 28.00 ಕೋಟಿಗಳಲ್ಲಿ ಹುಡ್ಕೋ ಸಂಸ್ಥೆಗೆ ಪಾವತಿಸಬೇಕಾದ ಹೆಚ್ಚುವರಿ ಬಡ್ಡಿ ಮೊತ್ತ ರೂ. 68.00 ಲಕ್ಷಗಳನ್ನು ಪಾವತಿಸಲು ಉದ್ದೇಶ ಹಾಗೂ ಸಕಾರಣಗಳನ್ನು ಸೂಚಿಸಿ ಬಿಡುಗಡೆಗೊಳಿಸಲು ಆಡಳಿತ ಇಲಾಖೆ ಕ್ರಮ ವಹಿಸಲು ಸೂಚಿಸಿರುತ್ತದೆ.

ಸದರಿ ಲೆಕ್ಕಶೀರ್ಷಿಕೆಯಡಿಯಲ್ಲಿ 2010–11ನೇ ಸಾಲಿನಲ್ಲಿ ಕೊರತೆ ಕಂಡುಬಂದಲ್ಲಿ ಹೆಚ್ಚುವರಿ ಅಥವಾ ಪುನರ್ ವಿನಿಯೋಗ (Re-appropriation) ಬಗ್ಗೆ ಯೋಚಿಸಬಹುದಾಗಿರುತ್ತದೆ ಎಂದು ಸಹಾ ತಿಳಿಸಲಾಗಿರುತ್ತದೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ವಇ 21 ಕೊಮಂಲೆ 2010 (ಭಾ–1), ಬೆಂಗಳೂರು, ದಿನಾಂಕ : 30–08–2010**

ಪ್ರಸ್ತಾವನೆಯನ್ನು ಪರಿಶೀಲಿಸಿ ಪೌರಾಡಳಿತ ನಿರ್ದೇಶನಾಲಯವು ನಗರಾಭಿವೃದ್ಧಿ ಇಲಾಖೆಯನ್ನು ನಗರ ಸ್ಥಳೀಯ ಸಂಸ್ಥೆಯ ವ್ಯಾಪ್ತಿಯಲ್ಲಿ ಸಮಗ್ರ ಕಡಿಮೆ ವೆಚ್ಚದ ಶೌಚಾಲಯ (IPLCS) ನಿರ್ಮಾಣ ಮಾಡುವ ಸಲುವಾಗಿ ಪಡೆದಿದ್ದ ಸಾಲದ ಬಾಕಿ ಸಂಬಂಧ ಅಸಲು, ಬಡ್ಡಿ ಪೀನಲ್ ಬಡ್ಡಿ ಸೇರಿ 30/6/10ರ ಅಂತ್ಯಕ್ಕೆ ರೂ. 68.00 ಲಕ್ಷಗಳನ್ನು ಹುಡ್ಕೋ ಸಂಸ್ಥೆಗೆ ಪಾವತಿಸಲು ಕೋರಿದ್ದ ಮೇರೆಗೆ ಹಾಗೂ ಹುಡ್ಕೋ ಸಾಲದ ಮೇಲು ಉಸ್ತುವಾರಿ ಲೆಕ್ಕಶೀರ್ಷಿಕೆ 4217–60–800–3–01 (ಯೋಜನೇತರ) ರಡಿಯಲ್ಲಿ 2010–11ನೇ ಸಾಲಿನಲ್ಲಿ ಲಭ್ಯವಿರುವ ರೂ. 28.00 ಕೋಟಿಗಳಲ್ಲಿ ರೂ. 68.00 ಲಕ್ಷಗಳನ್ನು ಪಾವತಿಸಲು ಆಡಳಿತ ಇಲಾಖೆಯ ಅಗತ್ಯ ಕ್ರಮವಹಿಸಲು ಆರ್ಥಿಕ ಇಲಾಖೆಯು ಸೂಚಿಸಿದ ಮೇರೆಗೆ, ಆರ್ಥಿಕ ಇಲಾಖೆಯ ಸಹಮತಿಯಂತೆ ಸದರಿ ಲೆಕ್ಕಶೀರ್ಷಿಕೆಯಡಿಯಲ್ಲಿ ರೂ. 68.00 (ಅರವತ್ತೆಂಟು ಲಕ್ಷ ರೂಪಾಯಿಗಳು ಮಾತ್ರ) ಗಳನ್ನು ಕೊಳಚೆ ನಿರ್ಮೂಲನ ಮಂಡಳಿಗೆ ಬಿಡುಗಡೆ ಮಾಡಿ, ಸದರಿ ಮೊತ್ತವನ್ನು ಪೌರಾಡಳಿತ ನಿರ್ದೇಶನಾಲಯವು ಹುಡ್ಕೋ ಸಂಸ್ಥೆಗೆ ಪಾವತಿಸಬೇಕಾಗಿರುವ IPLCS ಸಾಲದ ಹೆಚ್ಚುವರಿ ಬಡ್ಡಿಯನ್ನು ಹುಡ್ಕೋ ಸಂಸ್ಥೆಗೆ ಪಾವತಿಮಾಡಲು ಪೌರಾಡಳಿತ ನಿರ್ದೇಶನಾಲಯಕ್ಕೆ ತಿಳಿಸಬೇಕೆಂದು ಸೂಚಿಸಿದೆ.

ಸದರಿ ಮೊತ್ತವನ್ನು ಈ ಕೆಳಕಂಡ ನಿಬಂಧನೆಗೊಳಪಟ್ಟು ಬಿಡುಗಡೆಗೊಳಿಸಿದೆ.

1. ಸರ್ಕಾರದ ಉಪ ಕಾರ್ಯದರ್ಶಿ, ವಸತಿ ಇಲಾಖೆ, ಬೆಂಗಳೂರು ಇವರು ಹಣ ಬಿಡುಗಡೆ ಮಾಡುವ ಬಿಲ್ಲಿಗೆ ಮೇಲು ರುಜು ಮಾಡಲು ಅಧಿಕೃತವಾಗಿರುತ್ತಾರೆ.

2. ಈ ಆದೇಶದಲ್ಲಿ ಬಿಡುಗಡೆ ಮಾಡಲಾಗಿರುವ ಮೊತ್ತವನ್ನು ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಯು ಪೌರಾಡಳಿತ ನಿರ್ದೇಶನಾಲಯಕ್ಕೆ ಬಿಡುಗಡೆ ಮಾಡಿ, ಹುಡ್ಕೋ ಸಂಸ್ಥೆ ಪಾವತಿಸಿರುವ ಬಗ್ಗೆ ಸ್ವೀಕೃತಿ ಪಡೆದು, ಪ್ರತ್ಯೇಕ ಲೆಕ್ಕವನ್ನು ಇಡತಕ್ಕದ್ದು.
3. ಯಾವ ಉದ್ದೇಶಕ್ಕಾಗಿ ಹಣ ಬಿಡುಗಡೆ ಮಾಡಿದೆಯೋ ಅದೇ ಉದ್ದೇಶಕ್ಕಾಗಿ ಬಳಸತಕ್ಕದ್ದು.
4. ಪ್ರಸಕ್ತ ಸಾಲಿನಲ್ಲಿ ಬಿಡುಗಡೆ ಮಾಡಿದ ಹಣಕಾಸಿನ ಮೊತ್ತದ ಬಳಕೆ ಪ್ರಮಾಣ ಪತ್ರವನ್ನು ಪೌರಾಡಳಿತ ನಿರ್ದೇಶನಾಲಯದಿಂದ ಪಡೆದು ಮಹಾಲೇಖಪಾಲರು, ಕರ್ನಾಟಕ, ಬೆಂಗಳೂರು ಇವರಿಗೆ ಕಳುಹಿಸಿ ಅದರ ಪ್ರತಿಯನ್ನು ಸರ್ಕಾರಕ್ಕೆ ಕಳುಹಿಸುವುದು.

ಈ ಆದೇಶವನ್ನು ನಗರಾಭಿವೃದ್ಧಿ ಇಲಾಖೆಯ ಕಡತ ಸಂಖ್ಯೆ: UDD 108 GEL 08 ರಲ್ಲಿ ಆರ್ಥಿಕ ಇಲಾಖೆಯು ನೀಡಿರುವ ಹಿಂಬರಹ ಸಂಖ್ಯೆ:ಎಫ್‌ಡಿ 489 ವೆಚ್ಚ–9/2010, ದಿನಾಂಕ: 04–08–2010ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಜಿ.ಆರ್.ನಾಗರಾಜ**
ಪೀಠಾಧಿಕಾರಿ–4, ವಸತಿ ಇಲಾಖೆ

ಪಿ.ಆರ್. 2362

## ಮುಖ್ಯ ಕಾರ್ಯದರ್ಶಿಯವರ ಕಾರ್ಯಾಲಯ

### ಸುತ್ತೋಲೆ

ಸಂಖ್ಯೆ: ಆಇ 47 ಇಸಾಂಹ 2010, ಬೆಂಗಳೂರು, ದಿನಾಂಕ: 11–8–2010

**ವಿಷಯ :** ಭಾರತ ಸರ್ಕಾರವು 'Rupee' ಬದಲಾಗಿ **'₹'** ಚಿಹ್ನೆಯನ್ನು ಜಾರಿ ಮಾಡಿ ಸದರಿ ಚಿಹ್ನೆಯನ್ನು ರಾಜ್ಯಗಳು ಪ್ರಚಾರ ಮಾಡುವಂತೆ/ ಜನಪ್ರಿಯಗೊಳಿಸುವಂತೆ ಕೋರಿರುವ ಬಗ್ಗೆ.

ಡೈರೆಕ್ಟರ್ ಜನರಲ್, ಅರ್ಥ ಸಚಿವಾಲಯ, ಭಾರತ ಸರ್ಕಾರ, ನವದೆಹಲಿ ಇವರು ರಾಜ್ಯ ಸರ್ಕಾರಕ್ಕೆ ಬರೆದ ಪತ್ರ ಸಂಖ್ಯೆ:3/13/07–CY-II ದಿನಾಂಕ: 26–7–2010 ರಲ್ಲಿ ಭಾರತೀಯ ರೂಪಾಯಿಗೆ **'₹'** ಎಂಬ ಚಿಹ್ನೆಯನ್ನು ಹೊಸದಾಗಿ ಅಂಗೀಕರಿಸಿದ್ದು, ಈ ಹಿಂದೆ ನಮೂದಿಸುತ್ತಿದ್ದ ಚಿಹ್ನೆಯ ಬದಲಿಗೆ ಸದರಿ ಚಿಹ್ನೆಯನ್ನು ಎಲ್ಲಾ ರಾಜ್ಯಗಳು ಮತ್ತು ಕೇಂದ್ರಾಡಳಿತ ಪ್ರದೇಶಗಳು ಪ್ರಚಾರಗೊಳಿಸಿ, ಜನಪ್ರಿಯಗೊಳಿಸುವಂತೆ ಕೋರಲಾಗಿದೆ. ಸದರಿ ಪತ್ರದಲ್ಲಿನ ಅಂಶವನ್ನು ಕೆಳಗೆ ಒದಗಿಸಲಾಗಿದೆ.

I would like to inform you that the Government has approved the symbol for the Indian Rupee as depicted below.

**₹**

2. In view of the above, I shall be grateful if you could kindly propagate and popularize the use of the symbol for the Indian Rupee in place of any symbol presently in use within your State/UT and to progressively discourage the use of regional language symbol for Indian Rupee, if any, so that a single symbol ultimately comes in use throughout the country.

ಆ ಹಿನ್ನೆಲೆಯಲ್ಲಿ, ಸದರಿ ಹೊಸ **₹** ಚಿಹ್ನೆಯನ್ನು ಕಟ್ಟುನಿಟ್ಟಾಗಿ ಅನುಷ್ಠಾನಗೊಳಿಸಲು ಕ್ರಮ ತೆಗೆದುಕೊಳ್ಳುವಂತೆ ಸಚಿವಾಲಯದ ಎಲ್ಲಾ ಇಲಾಖೆಗಳು, ಇಲಾಖಾ ಮುಖ್ಯಸ್ಥರು, ಎಲ್ಲಾ ಜಿಲ್ಲಾಧಿಕಾರಿಗಳು, ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು ಇವರಿಗೆ ಈ ಮೂಲಕ ಸೂಚಿಸಿದೆ.

ಈ ಹೊಸ ಚಿಹ್ನೆಯನ್ನು ಗಣಕಯಂತ್ರದಲ್ಲಿ ಅಳವಡಿಸಿಕೊಳ್ಳಲು http://www.karunadu.gov.in ಈ ಇಂಟರ್‌ನೆಟ್ ವಿಳಾಸದಲ್ಲಿ ಲಭ್ಯವಿರುವ Rupee font ನ್ನು ಡೌನ್‌ಲೋಡ್ ಮಾಡಿಕೊಳ್ಳಬಹುದು.

**ಎಸ್.ವಿ.ರಂಗನಾಥ್**
ಸರ್ಕಾರದ ಮುಖ್ಯ ಕಾರ್ಯದರ್ಶಿಗಳು
ಕರ್ನಾಟಕ ಸರ್ಕಾರ

ಪಿ.ಆರ್. 2363

## ವಸತಿ ಸಚಿವಾಲಯ

**ವಿಷಯ :** ನೆರೆಹಾವಳಿ ಸಂತ್ರಸ್ಥರಿಗೆ ಪುನರ್ವಸತಿ ಕಲ್ಪಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ವಇ 16 ಹೆಚ್‌ಎಹೆಚ್ 2010, ದಿನಾಂಕ: 12–03–2010.
2. ಮಾನ್ಯ ಮುಖ್ಯಮಂತ್ರಿಯವರ ಕಾರ್ಯದರ್ಶಿಯವರ ಟಿಪ್ಪಣಿ ಸಂಖ್ಯೆ: ಮುಮಕಾ/5347/2010, ದಿನಾಂಕ: 24–08–2010.
3. ಸರ್ಕಾರದ ಆದೇಶ ಸಂಖ್ಯೆ: ವಇ 16 ಹೆಚ್‌ಎಹೆಚ್ 2010, ದಿನಾಂಕ: 21–08–2010.

**ಪ್ರಸ್ತಾವನೆ:**

ಮಾನ್ಯ ಮುಖ್ಯಮಂತ್ರಿಯವರ ಕಾರ್ಯದರ್ಶಿಯವರ ದಿನಾಂಕ: 24–08–2010ರ ಪತ್ರದಲ್ಲಿ ರಾಯಚೂರು ಜಿಲ್ಲೆಯಲ್ಲಿ ರಾಯಚೂರು ಮತ್ತು ಮಾನ್ವಿ ತಾಲ್ಲೂಕುಗಳಲ್ಲಿ 1529 ಆಸರೆ ಮನೆಗಳ ನಿರ್ಮಾಣ ಕಾರ್ಯವನ್ನು ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮಕ್ಕೆ ವಹಿಸಿಕೊಡಲಾಗಿದ್ದು, ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ವಇ 16 ಹೆಚ್‌ಎಹೆಚ್ 2010, ಬೆಂಗಳೂರು, ದಿನಾಂಕ : 30ನೇ ಆಗಸ್ಟ್ 2010**

ನೆರೆಹಾವಳಿ ಸಂತ್ರಸ್ಥರಿಗೆ ಪುನರ್ವಸತಿ ಕಲ್ಪಿಸುವುದಕ್ಕಾಗಿ ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮವು ಈಗ ನಿರ್ಮಿಸಿರುವ ಮನೆಗಳ ನಿರ್ಮಾಣದ ಷರತ್ತು ಮತ್ತು ನಿಬಂಧನೆಗಳ ಮೇರೆಗೆ ಪರಿಷ್ಕರಿಸಿದ ಘಟಕ ವೆಚ್ಚದಲ್ಲಿ ಈ ಕೆಳಕಾಣಿಸಿದಂತೆ ಮನೆಗಳನ್ನು ಆಸರೆ ಯೋಜನೆಯಡಿ ನಿರ್ಮಿಸಲು ಆದೇಶಿಸಲಾಗಿದೆ:

| ಕ್ರಸಂ. | ತಾಲ್ಲೂಕು | ಗ್ರಾಮಗಳು | ಮನೆಗಳ ಸಂಖ್ಯೆ |
|---|---|---|---|
| 1 | ರಾಯಚೂರು | ತುಂಗಭದ್ರಾ | 420 |
| | | ರಘುನಾಥನಹಳ್ಳಿ | 215 |
| | | ಗುಡಿಹಾಳ (ಪಾರ್ಟ್) | 100 |
| | | ಬುರ್ದಿಪಾಡ್ | 590 |
| 2 | ಮಾನ್ವಿ | ಯಡಿವಾಳ | 204 |
| | | **ಒಟ್ಟು** | **1529** |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಆರ್.ವಲ್ಲೂರ**
ಪೀಠಾಧಿಕಾರಿ–2, ವಸತಿ ಇಲಾಖೆ

ಪಿ.ಆರ್. 2364

## ಆರ್ಥಿಕ ಸಚಿವಾಲಯ

**ವಿಷಯ :** ಪ್ರೋರಾಟ ಆಧಾರದ ಮೇಲೆ ಸೃಜಿಸಲಾದ 45 ಹುದ್ದೆಗಳನ್ನು ಖಾಯಂಗೊಳಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: FD 1 KID 83, ದಿನಾಂಕ: 07–05–1983.
2. ಸರ್ಕಾರಿ ಆದೇಶ ಸಂಖ್ಯೆ: FD 83 KID 85, ದಿನಾಂಕ: 22.04.1985.
3. ಸರ್ಕಾರಿ ಆದೇಶ ಸಂಖ್ಯೆ: FD 106 KID 86, ದಿನಾಂಕ: 13.05.1986.
4. ಸರ್ಕಾರಿ ಆದೇಶ ಸಂಖ್ಯೆ: ಆರ್ಥಿಕ 71 ಕವಿಇ 87, ದಿನಾಂಕ: 01.04.1987.
5. ಸರ್ಕಾರಿ ಆದೇಶ ಸಂಖ್ಯೆ: ಆಇ 85 ಕವಿಇ 88, ದಿನಾಂಕ: 16.05.1988.
6. ಸರ್ಕಾರಿ ಆದೇಶ ಸಂಖ್ಯೆ: ಆಇ 94 ಕವಿಇ 89, ದಿನಾಂಕ: 06.05.1989.
7. ಸರ್ಕಾರಿ ಆದೇಶ ಸಂಖ್ಯೆ: ಆಇ 94 ಕವಿಇ 89, ದಿನಾಂಕ: 24.04.1990.
8. ಸರ್ಕಾರಿ ಆದೇಶ ಸಂಖ್ಯೆ: ಆಇ 41 ಕವಿಇ 91, ದಿನಾಂಕ: 10.05.1991.
9. ಸರ್ಕಾರಿ ಆದೇಶ ಸಂಖ್ಯೆ: ಆಇ 31 ಕವಿಇ 92, ದಿನಾಂಕ: 25.06.1992.
10. ಸರ್ಕಾರಿ ಆದೇಶ ಸಂಖ್ಯೆ: ಆಇ 80 ಕವಿಇ 93, ದಿನಾಂಕ: 28.07.1993.
11. ಸರ್ಕಾರಿ ಆದೇಶ ಸಂಖ್ಯೆ: ಆಇ 91 ಕವಿಇ 94, ದಿನಾಂಕ: 03.01.1995.
12. ಸರ್ಕಾರಿ ಆದೇಶ ಸಂಖ್ಯೆ: ಆಇ 91 ಕವಿಇ 94, ದಿನಾಂಕ: 12.09.1995
13. ಸರ್ಕಾರಿ ಆದೇಶ ಸಂಖ್ಯೆ: ಆಇ 132 ಕವಿಇ 96, ದಿನಾಂಕ: 19.09.1996.
14. ಸರ್ಕಾರಿ ಆದೇಶ ಸಂಖ್ಯೆ: ಆಇ 43 ಕವಿಇ 97, ದಿನಾಂಕ: 20.05.1997.
15. ಸರ್ಕಾರಿ ಆದೇಶ ಸಂಖ್ಯೆ: ಆಇ 27 ಕವಿಇ 98, ದಿನಾಂಕ: 14.05.1998.
16. ಸರ್ಕಾರಿ ಆದೇಶ ಸಂಖ್ಯೆ: ಆಇ 57 ಕವಿಇ 99, ದಿನಾಂಕ: 11.01.2000.
17. ಸರ್ಕಾರಿ ಆದೇಶ ಸಂಖ್ಯೆ: ಆಇ 57 ಕವಿಇ 99, ದಿನಾಂಕ: 17.05.2001.
18. ಸರ್ಕಾರಿ ಆದೇಶ ಸಂಖ್ಯೆ: ಆಇ 51 ಕವಿಇ 2001, ದಿನಾಂಕ: 14.06.2002.
19. ಸರ್ಕಾರಿ ಆದೇಶ ಸಂಖ್ಯೆ: ಆಇ 51 ಕವಿಇ 2001, ದಿನಾಂಕ: 07.06.2003.
20. ಸರ್ಕಾರಿ ಆದೇಶ ಸಂಖ್ಯೆ: ಆಇ 51 ಕವಿಇ 2001 (ಭಾ), ದಿನಾಂಕ: 21.05.2004.
21. ಸರ್ಕಾರಿ ಆದೇಶ ಸಂಖ್ಯೆ: ಆಇ 51 ಕವಿಇ 2001 (ಭಾ), ದಿನಾಂಕ: 27.04.2006.
22. ಸರ್ಕಾರಿ ಆದೇಶ ಸಂಖ್ಯೆ: ಆಇ 67 ಕವಿಇ 2007, ದಿನಾಂಕ: 01.12.2007.
23. ಸರ್ಕಾರಿ ಆದೇಶ ಸಂಖ್ಯೆ: ಆಇ 67 ಕವಿಇ 2007, ದಿನಾಂಕ: 17.05.2008.
24. ಸರ್ಕಾರಿ ಆದೇಶ ಸಂಖ್ಯೆ: ಆಇ 67 ಕವಿಇ 2007, ದಿನಾಂಕ: 05.10.2009.
25. ನಿರ್ದೇಶಕರು, ಕರ್ನಾಟಕ ಸರ್ಕಾರಿ ವಿಮಾ ಇಲಾಖೆ, ಬೆಂಗಳೂರು, ಇವರ ಪತ್ರ ಸಂಖ್ಯೆ:ವಿನಿ/ಸಿಶಾ/ಪ್ರೋರಾಟ/1782/09–10, ದಿನಾಂಕ: 01.01.2010.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ಕರ್ನಾಟಕ ಸರ್ಕಾರಿ ವಿಮಾ ಇಲಾಖೆಯಲ್ಲಿ ಪ್ರೋರಾಟ ಆಧಾರದ ಮೇಲೆ ಈ ಕೆಳಕಂಡ 64 ಹುದ್ದೆಗಳನ್ನು ಒಂದು ವರ್ಷದ ಅವಧಿಗೆ ಸೃಜಿಸಲಾಗಿತ್ತು.

| ಕ್ರ. ಸಂ. | ಹುದ್ದೆಗಳು | ಸಂಖ್ಯೆ |
|---|---|---|
| 1 | ಸಹಾಯಕ ನಿರ್ದೇಶಕರು | 1 |
| 2 | ಅಧೀಕ್ಷಕರು | 5 |
| 3 | ಪ್ರಥಮ ದರ್ಜೆ ಸಹಾಯಕರು | 24 |
| 4 | ದ್ವಿತೀಯ ದರ್ಜೆ ಸಹಾಯಕರು | 25 |
| 5 | ಶೀಘ್ರಲಿಪಿಗಾರರು | 1 |
| 6 | ಬೆರಳಚ್ಚುಗಾರರು | 3 |

| | | |
|---|---|---|
| 7 | ಅನುಚರರು | 1 |
| 8 | ಗ್ರೂಪ್–ಡಿ | 4 |
| | **ಒಟ್ಟು:** | **64** |

ಮೇಲಿನ ಕ್ರಮ ಸಂಖ್ಯೆ (2) ರಿಂದ (17)ರವರೆಗೆ ಓದಲಾದ ಸರ್ಕಾರಿ ಆದೇಶಗಳಲ್ಲಿ ಈ ಹುದ್ದೆಗಳನ್ನು ಮುಂದುವರೆಸಿಕೊಂಡು ಬರಲಾಗಿದೆ. ಮೇಲೆ ಕ್ರಮ ಸಂಖ್ಯೆ 18 ರಲ್ಲಿ ಓದಲಾದ ಆದೇಶದಲ್ಲಿ ಸರ್ಕಾರದ ನೀತಿಯಂತೆ ಈ ಹುದ್ದೆಗಳ ಪೈಕಿ ಶೇ.5 ರಷ್ಟು ಸಿಬ್ಬಂದಿ ಕಡಿತಗೊಳಿಸಿದ ನಂತರ ಕೆಳಗಿನ 45 ಹುದ್ದೆಗಳನ್ನು ದಿನಾಂಕ: 01.04.2002 ರಿಂದ ದಿನಾಂಕ: 31.03.2003ರವರೆಗೆ ಮುಂದುವರೆಸಿ, ಕ್ರಮ ಸಂಖ್ಯೆ (19) ರಿಂದ(24)ರವರೆಗೆ ಓದಲಾದ ಸರ್ಕಾರಿ ಆದೇಶಗಳಲ್ಲಿ ಈ ಹುದ್ದೆಗಳನ್ನು ಕಾಲಕಾಲಕ್ಕೆ ಮುಂದುವರೆಸಿಕೊಂಡು ಬರಲಾಗಿದೆ.

| ಕ್ರ.ಸಂ. | ಹುದ್ದೆಗಳು | ಸಂಖ್ಯೆ |
|---|---|---|
| 1 | ಸಹಾಯಕ ನಿರ್ದೇಶಕರು: ಜಿಲ್ಲಾ ವಿಮಾ ಅಧಿಕಾರಿ | 5 |
| 2 | ಅಧೀಕ್ಷಕರು | 13 |
| 3 | ದ್ವಿತೀಯ ದರ್ಜೆ ಸಹಾಯಕರು | 26 |
| 4 | ಬೆರಳಚ್ಚುಗಾರರು | 1 |
| | **ಒಟ್ಟು:** | **45** |

ಮೇಲೆ ಕ್ರಮಸಂಖ್ಯೆ (25)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಕರ್ನಾಟಕ ಸರ್ಕಾರಿ ವಿಮಾ ಇಲಾಖೆ, ಇವರು ಈ 45 ಹುದ್ದೆಗಳನ್ನು ದೈನಂದಿನ ಕಾರ್ಯಗಳಿಗೆ ಹಂಗಾಮಿಯಾಗಿ ನೀಡಿರುವುದರಿಂದ ಈ ಹುದ್ದೆಗಳನ್ನು ಖಾಯಂ ಹುದ್ದೆಗಳಾಗಿ ಪರಿವರ್ತಿಸುವುದು ಅತ್ಯವಶ್ಯವೆಂದು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಈ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : 67 ಕವಿಇ 2007, ಬೆಂಗಳೂರು, ದಿನಾಂಕ : 23ನೇ ಆಗಸ್ಟ್, 2010.**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ ಕರ್ನಾಟಕ ಸರ್ಕಾರಿ ವಿಮಾ ಇಲಾಖೆಯಲ್ಲಿ ಪ್ರೋರಾಟ ಆಧಾರದ ಮೇಲೆ ಸೃಜಿಸಲಾಗಿದ್ದ ಈ ಕೆಳಕಂಡ 45 ಹುದ್ದೆಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಖಾಯಂಗೊಳಿಸಿ ಆದೇಶಿಸಲಾಗಿದೆ.

| ಕ್ರ.ಸಂ. | ಹುದ್ದೆಗಳು | ಸಂಖ್ಯೆ |
|---|---|---|
| 1 | ಸಹಾಯಕ ನಿರ್ದೇಶಕರು: ಜಿಲ್ಲಾ ವಿಮಾ ಅಧಿಕಾರಿ | 5 |
| 2 | ಅಧೀಕ್ಷಕರು | 13 |
| 3 | ದ್ವಿತೀಯ ದರ್ಜೆ ಸಹಾಯಕರು | 26 |
| 4 | ಬೆರಳಚ್ಚುಗಾರರು | 1 |
| | **ಒಟ್ಟು:** | **45** |

ಈ ಆದೇಶವನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸಿಬ್ಬಂದಿ–1) ಟಿಪ್ಪಣಿ ಸಂಖ್ಯೆ: ಸಿಆಸುಇ 105 ಸಿಶಾಸೇ 2010, ದಿನಾಂಕ: 19.07.2010ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎನ್. ಶ್ರೀನಿವಾಸ ಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಆಡಳಿತ & ಮುಂಗಡಗಳು)

ಪಿ.ಆರ್. 2365

## ಆರ್ಥಿಕ ಸಚಿವಾಲಯ

**ವಿಷಯ :** ವಾಣಿಜ್ಯ ತೆರಿಗೆ ಅಧಿಕಾರಿಗಳಾದ ಶ್ರೀ ಪ್ರಕಾಶ್ ಕೆ., ಶ್ರೀ ಬಿರಾದಾರ್ ಬಿ.ಐ., ಮತ್ತು ಶ್ರೀ ಕುಮಾರಸ್ವಾಮಿ, ಇವರುಗಳ ವಿರುದ್ಧ ಜಂಟಿ ವಿಚಾರಣೆ ನಡೆಸಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ :** ವಾಣಿಜ್ಯ ತೆರಿಗೆ ಆಯುಕ್ತರ ಪತ್ರ ಸಂಖ್ಯೆ:ವಿಸಿಆರ್: ಜಿಎಜಡ್: ಸಿಆರ್:06:10–11, ದಿನಾಂಕ: 14.07.2010

**ಪ್ರಸ್ತಾವನೆ :**

ಮೇಲೆ ಓದಲಾದ ವಾಣಿಜ್ಯ ತೆರಿಗೆ ಆಯುಕ್ತರ ಪತ್ರ ದಿನಾಂಕ: 14.07.2010 ರಲ್ಲಿ ವಾಣಿಜ್ಯ ತೆರಿಗೆ ಅಧಿಕಾರಿಗಳಾದ ಶ್ರೀ ಪ್ರಕಾಶ್ ಕೆ., ಶ್ರೀ ಬಿರಾದಾರ್ ಬಿ.ಐ., ಮತ್ತು ಶ್ರೀ ಕುಮಾರಸ್ವಾಮಿ, ಅವರುಗಳು ಬೆಳಗಾವಿಯ ಜಾರಿ ವಿಭಾಗದ ನಿಪ್ಪಾಣಿಯಲ್ಲಿ ಕೊಗೊನಳ್ಳಿ (ಒಳ) ತನಿಖಾ ಠಾಣೆಯಲ್ಲಿ ಅನುಕ್ರಮವಾಗಿ ದಿ: 20–08–2008 ರಿಂದ ದಿ: 27–04–2010, ದಿನಾಂಕ: 07–08–2007 ರಿಂದ ದಿ: 27–04–2004 ಮತ್ತು ದಿ: 02–04–2007 ರಿಂದ ದಿ: 20–08–2008 ರವರೆಗೆ ನಂತರ 05–01–2009 ರಿಂದ 26–04–2010 ರವರೆಗಿನ ಅವಧಿಯಲ್ಲಿ ವಾಣಿಜ್ಯ ತೆರಿಗೆ ಅಧಿಕಾರಿಗಳಾಗಿ ಕರ್ತವ್ಯ ನಿರ್ವಹಿಸುತ್ತಿದ್ದರು. ಸದರಿ ಅಧಿಕಾರಿಗಳು ವಾಹನ ಸರಕಿನ ಪ್ರಮಾಣ ಮತ್ತು ಮೌಲ್ಯವನ್ನು ಪ್ರಸ್ತಾಪಿಸದೇ ದಂಡದ ಮೊತ್ತವನ್ನು ನಮೂದಿಸದೇ ಪ್ರಸ್ತಾವನಾ ನೋಟೀಸನ್ನು ಸರಕು ವಾಹನದ ಪ್ರಭಾರ ವ್ಯಕ್ತಿಗೆ ಜಾರಿ ಮಾಡದೇ, ದಂಡನಾದೇಶವನ್ನು ಹೊರಡಿಸದೇ ಅದರ ಪ್ರತಿಯನ್ನು ಪ್ರಭಾರ ವ್ಯಕ್ತಿಗೆ ಜಾರಿ ಮಾಡದೇ ಇಲಾಖೆಯು ವಿತರಿಸಿದ ಮುದ್ರಿತ ನೋಟೀಸು ಮತ್ತು ಆದೇಶಗಳ ಪ್ರತಿಗಳ ಮೇಲೆ ಏನನ್ನು ಬರೆಯದೇ ಅವುಗಳ ಮೇಲೆ ಪ್ರಭಾರ ವ್ಯಕ್ತಿಯ ಸಹಿ ಪಡೆದು, ದಂಡ/ತೆರಿಗೆಯನ್ನು ಅಸಂಬದ್ಧವಾಗಿ ಸಂಗ್ರಹಿಸಿ, ಸದರಿ ಕಾಯ್ದೆಯ ಕಲಂ 53(12)(ii)(1) (ಡಿ)ನ್ನು ಉಲ್ಲಂಘಿಸಿರುತ್ತಾರೆ. ಈ ರೀತಿಯಾಗಿ ಅರೆ ನ್ಯಾಯಿಕ ಆದೇಶಗಳನ್ನು ಕೈಗೊಳ್ಳುವಲ್ಲಿ ಬೇಜವಾಬ್ದಾರಿತನದಿಂದ ವರ್ತಿಸಿ ದುರ್ನಡತೆಯನ್ನೆಸಗಿರುವ ಆರೋಪಕ್ಕಾಗಿ ಈ ಕೆಳಕಂಡ ಅಧಿಕಾರಿಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ ನಡೆಸುವುದು ಸೂಕ್ತವೆಂದು ಅಭಿಪ್ರಾಯ ಪಟ್ಟಿರುತ್ತಾರೆ.

1) ಶ್ರೀ ಪ್ರಕಾಶ್ ಕೆ., ವಾಣಿಜ್ಯ ತೆರಿಗೆ ಅಧಿಕಾರಿ.
2) ಶ್ರೀ ಬಿರಾದಾರ್ ಬಿ.ಐ., ವಾಣಿಜ್ಯ ತೆರಿಗೆ ಅಧಿಕಾರಿ.
3) ಶ್ರೀ ಕುಮಾರಸ್ವಾಮಿ, ವಾಣಿಜ್ಯ ತೆರಿಗೆ ಅಧಿಕಾರಿ.

ಮೇಲಿನ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಈ ಪ್ರಕರಣದಲ್ಲಿನ ಅಧಿಕಾರಿಗಳು ಗ್ರೂಪ್–ಬಿ ವೃಂದಕ್ಕೆ ಸೇರಿದವರಾಗಿದ್ದು, ಇವರ ಶಿಕ್ಷೆ ವಿಧಿಸುವ ಸಕ್ಷಮ ಪ್ರಾಧಿಕಾರವು ಸರ್ಕಾರವಾಗಿದ್ದು, ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಆಇ 37 ವಾತೆತ 2010, ಬೆಂಗಳೂರು, ದಿನಾಂಕ: 23.08.2010**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 13 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಈ ಮುಂದೆ ತಿಳಿಸಿರುವ ಆಪಾದಿತ ಅಧಿಕಾರಿಗಳ ವಿರುದ್ಧ ಮೇಲೆ ಹೇಳಿದ ಆರೋಪಗಳ ಬಗ್ಗೆ ಸ್ಪಷ್ಟವಾದ ದೋಷಾರೋಪಣೆ ಪಟ್ಟಿಯನ್ನು ತಯಾರಿಸಿ ಒಂದೇ ವ್ಯವಹರಣೆಯಲ್ಲಿ ಶಿಸ್ತಿನ ಕ್ರಮ ಕೈಗೊಳ್ಳಬೇಕೆಂದು ಈ ಮೂಲಕ ಆದೇಶಿಸುತ್ತದೆ.

1) ಶ್ರೀ ಪ್ರಕಾಶ್ ಕೆ., ವಾಣಿಜ್ಯ ತೆರಿಗೆ ಅಧಿಕಾರಿ.
2) ಶ್ರೀ ಬಿರಾದಾರ್ ಬಿ.ಐ., ವಾಣಿಜ್ಯ ತೆರಿಗೆ ಅಧಿಕಾರಿ.
3) ಶ್ರೀ ಕುಮಾರಸ್ವಾಮಿ, ವಾಣಿಜ್ಯ ತೆರಿಗೆ ಅಧಿಕಾರಿ.

ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 11, 11–ಎ ನಲ್ಲಿ ನಿಗದಿಪಡಿಸಿರುವ ಕಾರ್ಯ ವಿಧಾನವನ್ನು ಈ ವಿಚಾರಣೆಯಲ್ಲಿ ಅನುಸರಿಸತಕ್ಕದ್ದು. ಈ ಪ್ರಕರಣಕ್ಕೆ ಸರ್ಕಾರವು ಶಿಸ್ತುಪ್ರಾಧಿಕಾರವಾಗಿದ್ದು, ಅದೇ ನಿಯಮದ ನಿಯಮ 8(ii) ರಿಂದ 8 (viii) ರ ವರೆವಿಗಿನ ಯಾವುದಾದರೂ ಅಥವಾ ಎಲ್ಲಾ ದಂಡನೆಯನ್ನು ವಿಧಿಸಲು ಪ್ರಾಧಿಕಾರವುಳ್ಳದ್ದಾಗಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಆರ್.ಚಂದ್ರಶೇಖರಾರಾಧ್ಯ**
ಪೀಠಾಧಿಕಾರಿ,
ಆರ್ಥಿಕ ಇಲಾಖೆ (ವಾಣಿಜ್ಯ ತೆರಿಗೆ–2).

ಪಿ.ಆರ್. 2366

## COMMERCE & INDUSTRIES SECRETARIAT

**Sub :** GIM – 2010 Follow-up action. Constitution of Task Force Committees for Aerospace, Automotive and Textile sectors.

**Read :** Letter No: D.O. No. KUM/CII/2010-11, dated: 21.08.2010.

**PREAMBLE :**

During Global Investors Meet a decision was taken to constitute Task Force Committees with support from CII & FICCI for speedy implementation of the projects approved and attract fresh investments. The CII has submitted a proposal for conducting a process Re-Engineering study and to constitute Task Force Committees. Vide their letter dated: 30.07.2010 and has suggested the members for Task Force Committees. Commissioner for ID & Director for I & C has submitted his recommendation. The Government has examined the proposal in detail & hence this order.

**GOVERNMENT ORDER NO : CI 438 SPI 2010, BANGALORE, DATED : 06.09.2010**

In the circumstances explained above, to ensure the speedy implementation of projects approved during Global Investors Meet and to attract fresh investment, Task Force Committees for Aerospace, Automotive and Textile are constituted as follows.

**I. TASK FORCE AEROSPACE:**

1. Chairman – Commissioner, Industrial Development, Government of Karnataka.
2. Vice Chairman and Convener – Chairman, CII, Karnataka / Vice – Chairman, CII, Karnataka.

**Members:**

1. Mr. A.K. Saxena, Director, UK Advanced Engineering [ADS].
2. Representative from Aerospace Practice, Price Waterhouse Coopers.
3. Representatives from Honeywell, BEL, EADS, Dynamatics, HAL, KUM, Antrix Corp, NAL.
4. Air Marshall T.J. Master [Regd.]-Master Aerospace Consultants Pvt. Ltd.,
5. Managing Director, Karnataka Skills & Vocational Training Development Corporation.

**II. TASK FORCE AUTOMOTIVE:**

1. Chairman – Principal Secretary, C & I, Government of Karnataka.
2. Vice Chairman – Chairman, CII Karnataka / Vice – Chairman, CII Karnataka.

**Members:**

1. Mr. T. Parabrahman, MD, Kirloskar Toyoda Textile Machinery Mfg Company Ltd.,
2. Mr. M. Lakshminarayan, MD, Harman India Pvt. Ltd.,
3. Mr. Sekhar Viswanathan, President, BCIC.
4. Mr. F.K. Singhvi, JMD, Sansera Ltd.,

5. Representatives from Bosch Ltd., FKCCI, KUM.
6. Prof. Rishikesha Krishnan, IIM Bangalore.

**III. TASK FORCE TEXTILE;**

1. Chairman – Secretary to Govt. C & I Dept. Vice Chairman – FICCI Official.

**Members:**

1. Commissioner, Textile.
2. Managing Director, KHDC.
3. Managing Director, KSPDCL.
4. FICCI representative.

By Order and in the name of the Governor of Karnataka,

**A.V.SRINIVASA DIKSHIT**

Desk Officer (Technical Cell)

P.R. 2367 Commerce & Industries Department.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಮಾಜ್ ಅಹಮದ್ ಷರೀಫ್. ಕೆ.ಎ.ಎಸ್. (ಸೂ.ಟೈಂ) ಅಧಿಕಾರಿ ಹಿಂದಿನ ಮುಖ್ಯ ಕಾರ್ಯನಿರ್ವಹಣಾಧಿಕಾರಿ ಕರ್ನಾಟಕ, ರಾಜ್ಯ ವಕ್ಫ್ ಮಂಡಳಿ ಹಾಲಿ ನಿರ್ದೇಶಕರು(ಸಿಬ್ಬಂದಿ ಮತ್ತು ಪರಿಸರ) ಕೆ.ಎಸ್.ಆರ್.ಟಿ.ಸಿ. ಇವರ ವಿರುದ್ಧ ಇಲಾಖಾ ವಿಚಾರಣೆ–ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಿಸುವ ಬಗ್ಗೆ.

**ಓದಲಾಗಿದೆ :** 1. ನೋಟೀಸ್ ಸಂ:ಸಿಆಸುಇ 179 ಕೆಇವಿ 07 ದಿ: 25–06–2010.

2. ಶ್ರೀ ಮಾಜ್ ಅಹಮದ್ ಷರೀಫ್, ಕೆ.ಎ.ಎಸ್. (ಸೂ.ಟೈಂ) ಅಧಿಕಾರಿ ಇವರ ದಿ: 11–08–10ರ ಉತ್ತರ.

**ಪ್ರಸ್ತಾವನೆ :**

ಶ್ರೀ ಮಾಜ್ ಅಹಮದ್ ಷರೀಫ್ ಕೆ.ಎ.ಎಸ್. (ಸೂ.ಟೈಂ) ಅಧಿಕಾರಿ ರವರು, ಕರ್ನಾಟಕ ರಾಜ್ಯ ವಕ್ಫ್ ಮಂಡಳಿಯಲ್ಲಿ ಮುಖ್ಯ ಕಾರ್ಯನಿರ್ವಹಣಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದಾಗ, ಸರ್ಕಾರವು ನೀಡಿದ ಅನುದಾನ ರೂ: 150.00 ಲಕ್ಷಗಳನ್ನು ನಿರ್ಲಕ್ಷತೆಯಿಂದ ತಮ್ಮ ಹತ್ತಿರದ ಸಂಬಂಧಿಗಳಿಗೆ ಸೇರಿದ ಮರ್ಕಂಟೈಲ್ ಕೋ–ಆಪರೇಟಿವ್ ಬ್ಯಾಂಕ್ (ಲಿ) ನಲ್ಲಿ ಠೇವಣಿ ಇಟ್ಟು ವಕ್ಫ್ ಮಂಡಳಿಯ ಹಣವನ್ನು ದುರುಪಯೋಗ–ಪಡಿಸಿಕೊಂಡು ಸರ್ಕಾರಕ್ಕೆ ಆರ್ಥಿಕ ನಷ್ಟ ಉಂಟು ಮಾಡಿ ಕರ್ತವ್ಯ ಎಸಗಿರುವ ಇತ್ಯಾದಿ ಕರ್ತವ್ಯ ಲೋಪ ಹಾಗೂ ದುರ್ನಡತೆಗೆ ಸಂಬಂಧಿಸಿದಂತೆ ಅವರಿಗೆ ಮೇಲೆ ಕ್ರಮ ಸಂ: (1)ರಲ್ಲಿ ಓದಲಾದ ದಿ: 25–06–2010 ರಲ್ಲಿ ನೋಟೀಸನ್ನು ಕರ್ನಾಟಕ ನಾಗರೀಕ ಸೇವಾ(ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11 ಮತ್ತು 11–ಎ ರನ್ವಯ ಜಾರಿ ಮಾಡಿ ಸಮಜಾಯಿಷಿ ಕೇಳುವ ಮೂಲಕ ಅವರ ವಿರುದ್ಧ ಇಲಾಖಾ ವಿಚಾರಣೆ ಪ್ರಾರಂಭಿಸಲಾಯಿತು. ನೋಟೀಸಿಗೆ ಸದರಿ ಅಧಿಕಾರಿಯು ಮೇಲೆ ಕ್ರಮ ಸಂ: (2)ರಲ್ಲಿ ಓದಲಾದ ದಿ: 11–08–2010ರ ಪತ್ರದಲ್ಲಿ ಉತ್ತರ ಸಲ್ಲಿಸಿ ತಮ್ಮ ಮೇಲೆ ಹೊರಿಸಲಾದ ಆರೋಪಗಳ ಕುರಿತು ಉತ್ತರ ನೀಡಲು ಕರ್ನಾಟಕ ವಕ್ಫ್ ಮಂಡಳಿಯ ಕಡತವನ್ನು ಒದಗಿಸಲು ಕೋರಿದ್ದರು. ಆದರೆ ಇವರ ಕೋರಿಕೆ ಮೇರೆಗೆ ದಾಖಲೆಗಳನ್ನು ಒದಗಿಸಿ ಸರ್ಕಾರದಿಂದ ಜಾರಿಗೊಳಿಸಲಾಗಿದ್ದ ನೋಟೀಸಿಗೆ ಉತ್ತರಿಸಲು ಸಾಕಷ್ಟು ಕಾಲಾವಕಾಶವನ್ನು ನೀಡಲಾಗಿದ್ದರೂ ಸಹ ಅವರು ಉತ್ತರ ಸಲ್ಲಿಸದೇ ವಿಚಾರಣೆಗೆ ಸಂಬಂಧಿಸಿದ ಬೇರೊಂದು ಕಡತವನ್ನು ಕರ್ನಾಟಕ ರಾಜ್ಯ ವಕ್ಫ್ ಮಂಡಳಿಯಿಂದ ಪಡೆದು ಒದಗಿಸುವಂತೆ ಕೋರಿರುವ ಅವರ ಕೋರಿಕೆಯು ಅಪೇಕ್ಷಣೀಯವಲ್ಲ. ಆದ್ದರಿಂದ ಅವರ ಮೇಲೆ ಹೊರಿಸಲಾದ ಆರೋಪಗಳಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆ ಮೂಲಕ ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ನಡೆಸಲು ಸರ್ಕಾರವು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂ : ಸಿಆಸುಇ 179 ಕೆಇವಿ 2007, ಬೆಂಗಳೂರು, ದಿ : 2ನೇ ಸೆಪ್ಟೆಂಬರ್ 2010.**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957 ರ ನಿಯಮ 11(2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಮಾಜ್ ಅಹಮದ್ ಷರೀಪ್, ಕೆ.ಎ.ಎಸ್. (ಸೂ.ಟೈಂ) ಅಧಿಕಾರಿ, ಹಿಂದಿನ ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಕರ್ನಾಟಕ ರಾಜ್ಯ ವಕ್ಫ್ ಮಂಡಳಿ ಹಾಲಿ ನಿರ್ದೇಶಕರು, (ಸಿಬ್ಬಂದಿ ಮತ್ತು ಪರಿಸರ) ಕೆ.ಎಸ್.ಆರ್.ಟಿ.ಸಿ ಇವರ ವಿರುದ್ಧ ಮಾಡಲಾದ ಆರೋಪಗಳ ಕುರಿತು ವಿಚಾರಣೆ ನಡೆಸಲು ಶ್ರೀ ಕುಕ್ಕಾಜಿ ರಾಮಕೃಷ್ಣ ಭಟ್, ನಿವೃತ್ತ ಜಿಲ್ಲಾ ನ್ಯಾಯಾಧೀಶರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಕ ಮಾಡಲಾಗಿದೆ.

ಈ ವಿಚಾರಣೆಗಾಗಿ ವಿಚಾರಣಾಧಿಕಾರಿಗಳು ಸರ್ಕಾರಿ ಆದೇಶ ಸಂ: ಸಿಆಸುಇ 22 ಸೇಇವಿ 2007 ದಿ: 11–04–2008 ರನ್ವಯ ರೂ: 8000/–ಗಳ ಗೌರವಧನ ಹಾಗೂ ವಾಹನ ಭತ್ಯೆ ರೂ. 1500/–ಗಳನ್ನು ಪಡೆಯಲು ಅರ್ಹರಿರುತ್ತಾರೆ.

ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ(ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರದ ಅಧೀನ ಕಾರ್ಯದರ್ಶಿ, ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ, ಕರ್ನಾಟಕ ಸರ್ಕಾರದ ಸಚಿವಾಲಯ ರವರನ್ನು ಮಂಡನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿದೆ. ವಿಚಾರಣೆಯನ್ನು ಅತಿ ಶೀಘ್ರವಾಗಿ ಮುಕ್ತಾಯಗೊಳಿಸಿ ವರದಿ ಸಲ್ಲಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವಾಸುದೇವಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 2368 ಸಿಆಸುಇ (ಸೇವೆಗಳು–2).

## ಆರ್ಥಿಕ ಸಚಿವಾಲಯ

**ವಿಷಯ :** ಶ್ರೀ ಜೆ.ಎಸ್.ರೇವಣಸಿದ್ಧಯ್ಯ, ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು, ಇವರನ್ನು ಸರ್ಕಾರಿ ಸೇವೆಯಿಂದ ವಜಾ ಮಾಡುವ ಬಗ್ಗೆ.

**ಓದಲಾಗಿದೆ :** 1) ಅಡಿಷನಲ್ ಡೈರೆಕ್ಟರ್ ಜನರಲ್ ಆಫ್ ಪೊಲೀಸ್, ನಾಗರೀಕ ಹಕ್ಕು ಜಾರಿ ನಿರ್ದೇಶನಾಲಯ, ಬೆಂಗಳೂರು ರವರ ಪತ್ರ ಸಂಖ್ಯೆ: ಜಾವಿ/20/ಬಿಆರ್/ನಾಹಜಾನಿ/2000 ದಿನಾಂಕ: 16–10–2008.

2) ವಾಣಿಜ್ಯ ಆಯುಕ್ತರ ಪತ್ರ ಸಂಖ್ಯೆ: ವಿಸಿಆರ್/ ಜಿಎಜಡ್/ ಸಿಆರ್–59/2007–2008 ದಿನಾಂಕ: 03–12–2008.

**ಪ್ರಸ್ತಾವನೆ :**

ಮೇಲೆ ಓದಲಾಗಿರುವ ಕ್ರಮ ಸಂಖ್ಯೆ: (1)ರ ಅಡಿಷನಲ್ ಡೈರೆಕ್ಟರ್ ಜನರಲ್ ಆಫ್ ಪೊಲೀಸ್, ನಾಗರೀಕ ಹಕ್ಕು ಜಾರಿ ನಿರ್ದೇಶನಾಲಯ, ಬೆಂಗಳೂರು ರವರ ಪತ್ರದಲ್ಲಿ ಸುಳ್ಳು ಜಾತಿ ಪ್ರಮಾಣ ಪತ್ರ ನೀಡಿ ಪರಿಶಿಷ್ಟ ಪಂಗಡದ ಮೀಸಲಾತಿ ಅಡಿಯಲ್ಲಿ ನೌಕರಿ ಪಡೆದಿರುವ ಶ್ರೀ ಜೆ.ಎಸ್.ರೇವಣಸಿದ್ಧಯ್ಯ, ಪ್ರಸ್ತುತ ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು, ಇವರನ್ನು ಸರ್ಕಾರಿ ಸೇವೆಯಿಂದ ವಜಾಗೊಳಿಸಲು ಕೋರಿ ವಾಣಿಜ್ಯ ತೆರಿಗೆ ಆಯುಕ್ತರಿಗೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಈ ಬಗ್ಗೆ ವಿಚಾರಣೆಯಿಂದ ಕಂಡುಬಂದ ಸತ್ಯಾಂಶಗಳ ಪ್ರಕಾರ ಚನ್ನಪಟ್ಟಣದ ವಸೂಲಿ ಕಛೇರಿಯಲ್ಲಿ ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರಾಗಿರುವ ಶ್ರೀ ಜೆ.ಎಸ್.ರೇವಣಸಿದ್ಧಯ್ಯರವರು 'ಒಕ್ಕಲಿಗ' ಜನಾಂಗಕ್ಕೆ ಸೇರಿದ್ದು, ಸುಳ್ಳು ಜಾತಿ ಪ್ರಮಾಣ ಪತ್ರ ಸಲ್ಲಿಸಿರುವ ಬಗ್ಗೆ ಹಲಸೂರು ಗೇಟ್ ಪೊಲೀಸ್ ಠಾಣೆಯಲ್ಲಿ ಭಾರತದ ದಂಡ ಸಂಹಿತೆ ಕಲಂ 192, 196 ಮತ್ತು 420ರ ರೀತ್ಯ ಮೊಕದ್ದಮೆ ಸಂಖ್ಯೆ: 410/2007ನ್ನು ದಾಖಲು ಮಾಡಿಕೊಂಡಿದ್ದು, ತನಿಖೆಯಲ್ಲಿ ಅಧಿಕಾರಿಯವರು ನೀಡಿರುವ **'ಕಾಡು ಕುರುಬ'** ಜಾತಿ ಪ್ರಮಾಣ ಪತ್ರವು ಸುಳ್ಳೆಂದು ಕಂಡುಬಂದಿರುವುದರಿಂದ ದಿನಾಂಕ: 24–10–2008 ರಂದು ದಸ್ತಗಿರಿ ಮಾಡಿ, ನಂತರ ಬೆಂಗಳೂರಿನ 6ನೇ ಮುಖ್ಯ ಅಪರ ಮೆಟ್ರೋ ಪಾಲಿಟನ್ ನ್ಯಾಯಾಲಯಕ್ಕೆ ಹಾಜರುಪಡಿಸಿದ್ದಾಗಿ ತಿಳಿಸಿರುತ್ತಾರೆಂದು ಅವರು ವರದಿ ಮಾಡಿರುತ್ತಾರೆ.

ಶ್ರೀ ಜೆ.ಎಸ್.ರೇವಣಸಿದ್ಧಯ್ಯ, ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು 1983 ರಲ್ಲಿ ವಾಣಿಜ್ಯ ತೆರಿಗೆ ಇಲಾಖೆಯಲ್ಲಿ ಪರಿಶಿಷ್ಟ ಪಂಗಡ ಮೀಸಲಾತಿ ಕೋಟಾದಡಿಯಲ್ಲಿ ಬಡ್ತಿ ಪಡೆದು ಈಗ ಸಹಾಯಕ ಆಯುಕ್ತ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆ. ನಾಗರೀಕ ಹಕ್ಕು ಜಾರಿ ನಿರ್ದೇಶನಾಲಯದ ಹೆಚ್ಚುವರಿ ಡಿ.ಜಿ.ಪಿ.ರವರು ಇವರ ಜಾತಿ ಪ್ರಮಾಣ ಪತ್ರದ ಬಗ್ಗೆ ತನಿಖೆ ನಡೆಸಿದ್ದು, ತನಿಖೆಯಲ್ಲಿ ಶ್ರೀ ರೇವಣಸಿದ್ಧಯ್ಯರವರು ಮೂಲತ: ಒಕ್ಕಲಿಗ ಜಾತಿಗೆ ಸೇರಿದವರಾಗಿದ್ದು, 1979 ರಲ್ಲಿ **'ಕಾಡು ಕುರುಬ'** ಎಂದು ಸುಳ್ಳು ಜಾತಿ ಪ್ರಮಾಣ ಪತ್ರವನ್ನು ಸೃಷ್ಟಿಸಿಕೊಂಡು ಪರಿಶಿಷ್ಟ ಪಂಗಡದ ಮೀಸಲಾತಿಯಲ್ಲಿ ನೇಮಕಗೊಂಡು ನಂತರ ಬಡ್ತಿ ಪಡೆದಿರುತ್ತಾರೆ ಎಂದು ತಿಳಿಸಿರುತ್ತಾರೆ. ಬೆಂಗಳೂರು ಉತ್ತರ ತಾಲ್ಲೂಕಿನ ತಹಶೀಲ್ದಾರರು, ತಮ್ಮ ಕಛೇರಿಯಲ್ಲಿಂದ ಈ ಜಾತಿ ಪ್ರಮಾಣ ಪತ್ರವನ್ನು ನೀಡಿಲ್ಲವೆಂದು ತಿಳಿಸಿ, ಶ್ರೀ ರೇವಣಸಿದ್ಧಯ್ಯರವರು ಹೊಂದಿರುವುದು ಸುಳ್ಳು ಜಾತಿ ಪ್ರಮಾಣ ಪತ್ರವೆಂದು ತಿಳಿಸಿರುತ್ತಾರೆ.

ನಾಗರೀಕ ಹಕ್ಕು ಜಾತಿ ನಿರ್ದೇಶನಾಲಯದ ಹೆಚ್ಚುವರಿ ಡಿ.ಜಿ.ಪಿ.ರವರು ಸರ್ವೋಚ್ಚ ನ್ಯಾಯಾಲಯದ ತೀರ್ಪನ್ನು ಉಲ್ಲೇಖಿಸಿ, ಶ್ರೀ ರೇವಣಸಿದ್ಧಯ್ಯರವರನ್ನು ಕೂಡಲೇ ಕೆಲಸದಿಂದ ವಜಾ ಮಾಡುವಂತೆ ಕೋರಿದ್ದಾರೆ. ನಾಗರೀಕ ಹಕ್ಕು ಜಾರಿ ನಿರ್ದೇಶನಾಲಯವು ಇವರ ವಿರುದ್ಧ ಮೊಕದ್ದಮೆ ದಾಖಲಿಸಿ ದೋಷಾರೋಪಣಾ ಪಟ್ಟಿಯನ್ನು ನ್ಯಾಯಾಲಯಕ್ಕೆ ಸಲ್ಲಿಸಿರುತ್ತದೆ. ಹೆಚ್ಚುವರಿ ಡಿ.ಜಿ.ಪಿ.ರವರು ಉಲ್ಲೇಖಿಸಿರುವ ಸರ್ವೋಚ್ಚ ನ್ಯಾಯಾಲಯದ ತೀರ್ಪಿನ ಉದ್ಧೃತ ಭಾಗತ ಈ ಕೆಳಕಂಡಂತಿದೆ:

"A person procuring appointment in a post meant of reserved category candidate, on the basis of a false caste certificate, held, is not a person holding civil post with in the meaning of article 311 such appointment, held, is no appointment in the eye of the law. Hence dismissal of a person so appointed, held does not attract article 311".

ಭಾರತ ಸರ್ವೋಚ್ಚ ನ್ಯಾಯಾಲಯದ ಸಿವಿಲ್ ಅಪೀಲು ಸಂಖ್ಯೆ: 4636/2008ರ ಮಧುಲಿಕ ಗುರುಪ್ರಸಾದ ಧಾಹಿರ್ ಮತ್ತು ಇತರರು ಪ್ರಕರಣದಲ್ಲಿ ದಿನಾಂಕ: 27–05–2008 ರಂದು ನೀಡಿರುವ ತೀರ್ಪಿನ ಅನುಸಾರ ಯಾವುದೇ ನೋಟೀಸನ್ನು ನೀಡದೇ ನೇಮಕಾತಿಯನ್ನು ರದ್ದು ಮಾಡತಕ್ಕದ್ದು ಮತ್ತು ಯಾವುದೇ ಹುದ್ದೆಯಲ್ಲಿ ಮುಂದುವರೆಸತಕ್ಕದ್ದಲ್ಲ ಎಂದು ತಿಳಿಸಲಾಗಿದೆ. ಅದರ ಉದ್ಧೃತ ಭಾಗ ಈ ಕೆಳಕಂಡಂತೆ ಇರುತ್ತದೆ.

"as soon as the finding is recorded by the scrutiny committee holding that the certificate obtained was false on its cancellation and confiscation simultaneously, it should be communicated to the educational institution a concerned, or the appointing authority with a request to cancel the admission on the appointment thereon, the admission or appointment shall be cancelled without any further notice to the candidate and the candidate shall be debarred from further study or continue in office in a post".

ನಾಗರೀಕ ಹಕ್ಕು ಜಾತಿ ನಿರ್ದೇಶನಾಲಯದ ತನಿಖೆಯಿಂದ ಶ್ರೀ ಜೆ.ಎಸ್.ರೇವಣಸಿದ್ಧಯ್ಯನವರು ಸುಳ್ಳು ಜಾತಿ ಪ್ರಮಾಣ ಪತ್ರ ನೀಡಿ, ಪರಿಶಿಷ್ಟ ಪಂಗಡಕ್ಕೆ ಮೀಸಲಾಗಿದ್ದ ವಾಣಿಜ್ಯ ತೆರಿಗೆ ಪರಿವೀಕ್ಷಕ ಹುದ್ದೆಗೆ ನೇಮಕಗೊಂಡಿರುವುದು ಸಾಬೀತಾಗಿರುವುದರಿಂದ ಮೇಲೆ ಉಲ್ಲೇಖಿಸಿದ ಸರ್ವೋಚ್ಚ ನ್ಯಾಯಾಲಯದ ತೀರ್ಪಿನನ್ವಯ ಅವರನ್ನು ಸೇವೆಯಲ್ಲಿ ಮುಂದುವರೆಸುವುದು ಸೂಕ್ತವಲ್ಲವೆಂದು ಹಾಗೂ ಅವರನ್ನು ತಕ್ಷಣ ಸೇವೆಯಿಂದ ವಜಾ ಮಾಡುವುದು ಸೂಕ್ತ ಹಾಗೂ ಅಗತ್ಯವೆಂದು ಸರ್ಕಾರವು ತೀರ್ಮಾನಿಸಿ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಇ 80 ವಾತೆತ 2008, ಬೆಂಗಳೂರು, ದಿನಾಂಕ: 02.09.2010.**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು, ಶ್ರೀ ಜೆ.ಎಸ್.ರೇವಣಸಿದ್ಧಯ್ಯ, ಪ್ರಸ್ತುತ ವಾಣಿಜ್ಯ ತೆರಿಗೆ ಇಲಾಖೆಯಲ್ಲಿ ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರಾದ ಇವರನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಜಾಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಆರ್.ಚಂದ್ರಶೇಖರಾರಾಧ್ಯ**
ಪೀಠಾಧಿಕಾರಿ,
ಆರ್ಥಿಕ ಇಲಾಖೆ (ವಾಣಿಜ್ಯ ತೆರಿಗೆ–2).

ಪಿ.ಆರ್. 2369

## HORTICULTURE SECRETARIAT

**Sub :** "Centrally Sponsored Scheme on Micro Irrigation" – Release of funds- reg.

**Read:** (1) G.O.No. HCD 92 HPP 2010 dated: 12.08.2010.

(2) Director of Horticulture letter No. ತೋಇ/ತೋಜಂನಿಹನೀ/ಸತೋಅ–1/4/2010–11 dated: 17.08.2010

**PREAMBLE :**

In the Government Order read at (1) above administrative approval has been accorded for the Implementation of the "Drip Irrigation-special subsidy for horticulture crops" Head of Account 2401-00-108-2-30 as a district sector scheme during the year 2010-11 on Mission Mode. Further, an amount of Rs. 387.50 lakhs has been released towards the State share out of Rs. 1550.00 lakhs available in State sector under the said Head of Account during 2010-11.

2. The Director of Horticulture in his letter read at (2) above has informed that the matching State share works out to be Rs. 3373.80 lakhs. Further, he has requested to release the balance of Rs. 2809.50 lakhs towards matching State share for the funds released from Government of India during 2010-11.

3. The request of the Director of Horticulture has been examined and hence this Order.

**Government Order No : HCD 92 HPP 2010, Bangalore, Dated : 02.09.2010**

Government is pleased to release to the Director of Horticulture an amount of Rs. 1162.50 lakhs (Rupees One Thousand One Hundred and Sixty Two Lakhs and Fifty Thousand Only) towards the State share for "Centrally Sponsored Scheme on Micro Irrigation" under the Head of Account 2401-00-108-2-30 in the State sector during the year 2010-11 as below;

| Object Code | Sub Head | Amount Released (Rs. In lakhs) |
|---|---|---|
| 059 | Other expenses | 937.50 |
| 422 | Special Component Plan | 150.00 |
| 423 | Tribal Sub Plan | 75.00 |
| | **TOTAL** | **1162.50** |

2. This Order issues with the concurrence of Internal Financial Advisor, Agriculture, Horticulture and Animal Husbandry Department vide its Note No. ಕೃತೋಇ 30 ಆಂಆಸ 2010 dated: 30.08.2010.

By Order and in the name of the Governor of Karnataka,

**UMA.K.**

Desk Officer (I/c)

P.R. 2370

Horticulture Department.

## ಕಂದಾಯ ಸಚಿವಾಲಯ

**ವಿಷಯ :** ಕೊಪ್ಪಳ ಜಿಲ್ಲೆ, ಕೊಪ್ಪಳ ತಾಲ್ಲೂಕಿನ ಕೂಕನಪಳ್ಳಿ ಗ್ರಾಮದ ಶ್ರೀ ಬೆಟ್ಟದಲಿಂಗೇಶ್ವರಸ್ವಾಮಿ ದೇವಸ್ಥಾನವನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ಸೇರ್ಪಡೆ ಮಾಡುವ ಬಗ್ಗೆ.

**ಓದಲಾಗಿದೆ :** ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆರವರ ಪತ್ರ ಸಂಖ್ಯೆ: ಎಡಿಎಂ 5 ಸಿಆರ್ 25/2007–08 ದಿನಾಂಕ: 25.06.2010

**ಪ್ರಸ್ತಾವನೆ :**

ಮೇಲೆ ಓದಲಾದ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆಯವರ ಪತ್ರ ದಿನಾಂಕ: 25.06.2010ರಲ್ಲಿ ಕೊಪ್ಪಳ ಜಿಲ್ಲೆ, ಕೊಪ್ಪಳ ತಾಲ್ಲೂಕಿನ ಕೂಕನಪಳ್ಳಿ ಗ್ರಾಮದ ಶ್ರೀ ಬೆಟ್ಟದಲಿಂಗೇಶ್ವರಸ್ವಾಮಿ ದೇವಸ್ಥಾನವನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ಸೇರಿಸುವ ಕುರಿತಂತೆ ಜಿಲ್ಲಾಧಿಕಾರಿಗಳು, ಕೊಪ್ಪಳ ಜಿಲ್ಲೆರವರ ವರದಿಯಂತೆ ಸದರಿ ದೇವಸ್ಥಾನಕ್ಕೆ ಸರ್ವೆ ನಂ. 127 ರಲ್ಲಿ 4 ಎಕರೆ ಜಮೀನಿದ್ದು, ಸದರಿ ದೇವಸ್ಥಾನವನ್ನು ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಕಾಯ್ದೆ 1997ರ ಸೆಕ್ಷನ್ 23(ಬಿ) ರನ್ವಯ ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ಸೇರಿಸುವಂತೆ ಕೋರಿರುತ್ತಾರೆ. ಸದರಿ ಸಂಸ್ಥೆಯು ಹಿಂದಿನ ಹೈದರಾಬಾದ್ ಎಂಡೋಮೆಂಟ್ ರೆಗ್ಯೂಲೇಷನ್ ಫಸಲಿ 1349 ಅನ್ವಯ ಬುಕ್ ಆಫ್ ಎಂಡೋಮೆಂಟ್ ಅಲ್ಲಿ ದಾಖಲಾಗಿರುವ ಬಗ್ಗೆ ಜಿಲ್ಲಾಧಿಕಾರಿಗಳು ದೃಢೀಕೃತ ನಕಲನ್ನು ಸಲ್ಲಿಸಿರುತ್ತಾರೆ. ಸದರಿ ದಾಖಲೆಯ ಕ್ರಮ ಸಂಖ್ಯೆ: 133 ರಲ್ಲಿ ಶ್ರೀ ಬೆಟ್ಟದೇಶ್ವರ ದೇವಸ್ಥಾನ, ಕೂಕನಪಳ್ಳಿ ಎಂದು ನಮೂದಾಗಿರುವುದರಿಂದ ಸದರಿ ದೇವಸ್ಥಾನವನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ಸೇರಿಸುವಂತೆ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆರವರು ಕೋರಿಕೆ ಸಲ್ಲಿಸಿರುತ್ತಾರೆ.

ಆಯುಕ್ತರು, ಧಾರ್ಮಿಕ ದತ್ತಿ ಇಲಾಖಾರವರ ಪ್ರಸ್ತಾವನೆಯನ್ನು ಸರ್ಕಾರವು ಕೂಲಕಂಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಕಂಇ 71 ಮುಆಬಿ 2010, ಬೆಂಗಳೂರು, ದಿನಾಂಕ : 01.09.2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಕೊಪ್ಪಳ ಜಿಲ್ಲೆ, ಕೊಪ್ಪಳ ತಾಲ್ಲೂಕಿನ ಕೂಕನಪಳ್ಳಿ ಗ್ರಾಮದ ಶ್ರೀ ಬೆಟ್ಟದಲಿಂಗೇಶ್ವರ ದೇವಸ್ಥಾನವನ್ನು ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಕಾಯ್ದೆ 1997ರ ಸೆಕ್ಷನ್ 23(ಬಿ) ರನ್ವಯ ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ಸೇರಿಸಿ, ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಜಿ.ರಾಮಚಂದ್ರಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಮುಜರಾಯಿ)

ಪಿ.ಆರ್. 2371

## ಕಂದಾಯ ಸಚಿವಾಲಯ

**ವಿಷಯ :** 2010ನೇ ಸಾಲಿನಲ್ಲಿ ಪ್ರಕೃತಿ ವಿಕೋಪ ಪರಿಹಾರ ಕಾರ್ಯಗಳಿಗೆ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಪ್ರಸ್ತಾವನೆ :**

ರಾಜ್ಯದಲ್ಲಿ ಇತ್ತೀಚೆಗೆ ಬಿದ್ದ ಭಾರಿ ಮಳೆಯಿಂದ ಮಾನವ ಹಾನಿ, ಜಾನುವಾರು ಹಾನಿ, ಮನೆ ಹಾನಿ ಹಾಗೂ ಮೂಲಭೂತ ಸೌಲಭ್ಯಗಳ ಹಾನಿಯಾಗಿರುವುದು ವರದಿಯಾಗಿದೆ. ಈ ಹಿನ್ನೆಲೆಯಲ್ಲಿ, ತುರ್ತು ಪರಿಹಾರ ಕ್ರಮಗಳನ್ನು ಕೈಗೊಳ್ಳಲು, ಜಿಲ್ಲಾಧಿಕಾರಿಗಳಿಗೆ ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಅನುದಾನ ಬಿಡುಗಡೆ ಮಾಡಲು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 350 ಟಿಎನ್‌ಆರ್ 2010, ಬೆಂಗಳೂರು, ದಿನಾಂಕ : 30-08-2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಪ್ರಕೃತಿ ವಿಕೋಪ ಪರಿಹಾರಕ್ಕಾಗಿ ಹಾಗೂ ಮೂಲಭೂತ ಸೌಲಭ್ಯಗಳ ತುರ್ತು ರಿಪೇರಿಗಾಗಿ ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಈ ಕೆಳಕಂಡಂತೆ ಜಿಲ್ಲಾಧಿಕಾರಿಗಳಿಗೆ ಅನುದಾನ ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

| ಕ್ರ. ಸಂ. | ಜಿಲ್ಲೆಯ ಹೆಸರು | ಬಿಡುಗಡೆ ಮಾಡಿದ ಅನುದಾನ (ರೂ. ಲಕ್ಷಗಳಲ್ಲಿ) |
|---|---|---|
| 1 | ಬಳ್ಳಾರಿ | 300.00 |
| 2 | ಗುಲ್ಬರ್ಗಾ | 300.00 |
| 3 | ಬೀದರ್ | 100.00 |
| 4 | ರಾಯಚೂರು | 100.00 |
| 5 | ಉಡುಪಿ | 100.00 |
| 6 | ದಕ್ಷಿಣ ಕನ್ನಡ | 100.00 |
| 7 | ಶಿವಮೊಗ್ಗ | 200.00 |
| 8 | ದಾವಣಗೆರೆ | 200.00 |
| | **ಒಟ್ಟು** | **1400.00** |

(ರೂ. ಒಂದು ಸಾವಿರದ ನಾಲ್ಕು ನೂರು ಲಕ್ಷಗಳು ಮಾತ್ರ)

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು ಪ್ರಕೃತಿ ವಿಕೋಪ ಪರಿಹಾರ ಮಾರ್ಗಸೂಚಿಗಳನ್ವಯ ಉಪಯೋಗಿಸಿಕೊಳ್ಳತಕ್ಕದ್ದು.

ಪ್ರಸ್ತುತ ಬಿಡುಗಡೆ ಮಾಡಿರುವ ಅನುದಾನವನ್ನು ಸಂಬಂಧಪಟ್ಟ ಜಿಲ್ಲೆಯ ಜಿಲ್ಲಾಧಿಕಾರಿಗಳು ಪೇಯೀಸ್ ರಸೀದಿ ಬಿಲ್ಲುಗಳನ್ನು ತಯಾರಿಸಿ, ಮೇಲು ರುಜು ಮಾಡಿ, ಜಿಲ್ಲಾ ಖಜಾನೆಯಿಂದ ಡ್ರಾ ಮಾಡಿ ಸಿ.ಆರ್.ಎಫ್.ಪಿಡಿ ಖಾತೆಗೆ ಜಮಾ ಮಾಡಿದ ನಂತರ ಪರಿಹಾರ ಕಾರ್ಯಗಳಿಗೆ ಉಪಯೋಗಿಸಿಕೊಳ್ಳತಕ್ಕದ್ದು.

ಈ ಮೊತ್ತವನ್ನು 2010-11ನೇ ಸಾಲಿನ ಆಯವ್ಯಯ ಲೆಕ್ಕ ಶೀರ್ಷಿಕೆ 2245-02-110-0-01-100 (ಯೋಜನೇತರ) ಅಡಿಯಲ್ಲಿ ಭರಿಸತಕ್ಕದ್ದು.

ಅನುದಾನ ವೆಚ್ಚ ಮಾಡುವಾಗ ಸರ್ಕಾರವು ಕಾಲ ಕಾಲಕ್ಕೆ ಹೊರಡಿಸಿರುವ ಮಾರ್ಗಸೂಚಿ/ಆದೇಶ/ ಸುತ್ತೋಲೆಗಳನ್ನು ಪಾಲಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆ ಟಿಪ್ಪಣಿಯ ಸಂಖ್ಯೆ: ಆಇ:347:ವೆಚ್ಚ-7/2010, ದಿನಾಂಕ: 30/8/2010 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಗಂಗಾಧರ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ,
(ವಿಪತ್ತು ನಿರ್ವಹಣೆ ಮತ್ತು ಸೇವೆಗಳು-2)

ಪಿ.ಆರ್. 2372

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಕರ್ನಾಟಕ ಉಚ್ಚ ನ್ಯಾಯಾಲಯದ ನಿವೃತ್ತ ನ್ಯಾಯಾಧೀಶರಿಗೆ ನಿವೃತ್ತಿ ಉಪದಾನದ ವ್ಯತ್ಯಾಸದ ಮೊತ್ತದ ಮೇಲೆ ಬಡ್ಡಿಯನ್ನು ಬಿಡುಗಡೆ ಮಾಡುವ ಬಗ್ಗೆ– ಆದೇಶ.

**ಓದಲಾಗಿದೆ :** 1) ಸರ್ಕಾರದ ಆದೇಶ ಸಂ:ಸಿಆಸುಇ 60 ಸೇಉನ್ಯಾ 2007, ಬೆಂಗಳೂರು, ದಿನಾಂಕ: 4.12.2008.

2) ಸರ್ಕಾರದ ಆದೇಶ ಸಂ: ಸಿಆಸುಇ 19 ಸೇಉನ್ಯಾ 2009, ಬೆಂಗಳೂರು, ದಿ: 10.12.2009.

3) ಖಜಾನೆ ನಿರ್ದೇಶಕರ ಪತ್ರ ಸಂ:ಖನಿ/ಬಿಯುಡಿ(2) ಸಿಆರ್ 70/09–10, ದಿನಾಂಕ: 15.05.2010.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಬಾರ್ ಕೌನ್ಸಿಲ್‌ನಿಂದ ಉಚ್ಚ ನ್ಯಾಯಾಲಯಕ್ಕೆ ನೇರವಾಗಿ ಆಯ್ಕೆಗೊಂಡು ನೇಮಕಗೊಂಡ ನ್ಯಾಯಾಧೀಶರಿಗೆ ನೀಡುತ್ತಿರುವ ಮಾದರಿಯಲ್ಲಿಯೇ ಅಧೀನ ನ್ಯಾಯಾಂಗ ಸೇವೆಯಿಂದ ಉಚ್ಚ ನ್ಯಾಯಾಲಯಕ್ಕೆ ಬಡ್ತಿ ಹೊಂದಿ ನೇಮಕವಾದ ನ್ಯಾಯಾಧೀಶರುಗಳಿಗೆ ಸಹ ಅಪವಾದಾತ್ಮಕ ಪ್ರಕರಣವೆಂದು ಪರಿಗಣಿಸಿ ನಿವೃತ್ತಿ ಉಪದಾನ (ಡಿ.ಸಿ.ಆರ್.ಜಿ) ಗರಿಷ್ಠ ರೂ. 3.50 ಲಕ್ಷಗಳಿಗೆ ನಿಗದಿಪಡಿಸಲಾಗಿತ್ತು ಹಾಗೂ ರಿಟ್ ಅರ್ಜಿ ಸಂ: 11805/2007 ರಲ್ಲಿನ 13 ಅರ್ಜಿದಾರರು ಹಾಗೂ 3 ಮಂದಿ ನಿಧನ ಹೊಂದಿದ ನ್ಯಾಯಾಧೀಶರ ಕುಟುಂಬದ ಸದಸ್ಯರಿಗೆ ದಿನಾಂಕ: 04.08.2008ರ ಆದೇಶದಲ್ಲಿ ನ್ಯಾಯಾಲಯವು ನಿರ್ದೇಶಿಸಿರುವಂತೆ ಪಾವತಿಸಬೇಕಾದ ನಿವೃತ್ತಿ ಉಪದಾನದ ಮೇಲಿನ ಬಡ್ಡಿಯನ್ನು ಸಹ ಪಾವತಿಸಲು ಆದೇಶಿಸಲಾಗಿದೆ. ಮೇಲೆ (2) ರಲ್ಲಿ ಓದಲಾದ ದಿನಾಂಕ: 10.12.2009ರ ಆದೇಶದಲ್ಲಿ ಕರ್ನಾಟಕ ಉಚ್ಚ ನ್ಯಾಯಾಲಯದ ನಿವೃತ್ತ ನ್ಯಾಯಾಧೀಶರುಗಳಿಗೆ ರಿಟ್ ಅರ್ಜಿ ಸಂ:11805/2007, ರ ತೀರ್ಪಿನನ್ವಯ ನಿವೃತ್ತಿ ಉಪದಾನದ ವ್ಯತ್ಯಾಸದ ಮೊತ್ತದ ಮೇಲೆ ಎಲ್ಲಾ ಅರ್ಜಿದಾರರಿಗೂ ವ್ಯತ್ಯಾಸದ ಮೊತ್ತವನ್ನು ಪಾವತಿಸಿದ ದಿನಾಂಕದವರೆಗೆ ರೂ.2097/– ರಷ್ಟು ಬಡ್ಡಿಯನ್ನು ಪಾವತಿಸಲು ಸರ್ಕಾರದ ಮಂಜೂರಾತಿಯನ್ನು ನೀಡಿದೆ. ಮೇಲೆ (3) ರಲ್ಲಿ ಓದಲಾದ ಖಜಾನೆ ನಿರ್ದೇಶಕರ ಪತ್ರದಲ್ಲಿ ರಿಟ್ ಅರ್ಜಿ ಸಂ:11805/2007ರ ತೀರ್ಪಿನಂತೆ 16 ಮಂದಿ ಅರ್ಜಿದಾರರಿಗೆ ನಿವೃತ್ತಿ ಉಪದಾನದ ಮೊತ್ತದ ಮೇಲಿನ ಬಡ್ಡಿ ಹಣವನ್ನು ಪಾವತಿಸಲು, 9 ಮಂದಿ ನಿವೃತ್ತ ನ್ಯಾಯಾಧೀಶರುಗಳು ಮಾತ್ರ ಸ್ವೀಕೃತಿ ರಸೀದಿಯನ್ನು ಸಹಿ ಮಾಡಿ ಕಳುಹಿಸಿದ್ದು, ಅವರುಗಳಲ್ಲಿ 8 ಮಂದಿ ನಿವೃತ್ತ ನ್ಯಾಯಾಧೀಶರುಗಳಿಗೆ ಬಡ್ಡಿ ಹಣವನ್ನು ಪಾವತಿಸಲಾಗಿದ್ದು, ನ್ಯಾಯಮೂರ್ತಿ ಶ್ರೀ ಬಿ.ಎಸ್.ಶ್ರೀನಿವಾಸ್ ರವರು ನಿಧನ ಹೊಂದಿದ್ದು, ಇವರ ಪತ್ನಿ ಶ್ರೀಮತಿ ಬಿ.ಎಸ್.ಸುಭದ್ರಮ್ಮ ಇವರಿಗೆ ಬಡ್ಡಿಯನ್ನು ಪಾವತಿಸಲು ಸೂಕ್ತ ಆದೇಶದ ಅವಶ್ಯಕತೆಯಿರುವುದಾಗಿ ತಿಳಿಸುತ್ತಾ, ಈ ಕೆಳಕಂಡ 4 ಮಂದಿ ನಿವೃತ್ತ ನ್ಯಾಯಾಧೀಶರಿಗೆ ಮತ್ತು ಇಬ್ಬರೂ ಮೃತ ನಿವೃತ್ತ ನ್ಯಾಯಾಧೀಶರ ಕುಟುಂಬದ 4 ಸದಸ್ಯರಿಗೆ ಬಡ್ಡಿಯನ್ನು ಪಾವತಿಸಬೇಕಾಗಿದ್ದು, ದಿನಾಂಕ: 10.12.2009ರ ಆದೇಶವು 2009–10ನೇ ಸಾಲಿನದ್ದಾಗಿದ್ದು, ಸದರಿ ಆದೇಶವು ರದ್ದಾಗಿರುವುದರಿಂದ ಸದರಿ ಮೊತ್ತವನ್ನು 2010–11ನೇ ಸಾಲಿನಲ್ಲಿ ಪಾವತಿಸಲು ಸೂಕ್ತವಾದ ಆದೇಶವನ್ನು ಹೊರಡಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂ : ಸಿಆಸುಇ 05 ಸೇಉನ್ಯಾ 2009, ಬೆಂಗಳೂರು, ದಿ : 28.08.2010.**

ಕರ್ನಾಟಕ ಉಚ್ಚ ನ್ಯಾಯಾಲಯದ ರಿಟ್ ಅರ್ಜಿ ಸಂ:11805/2007 ರ ತೀರ್ಪಿನನ್ವಯ ನಿವೃತ್ತಿ ಉಪದಾನದ ವ್ಯತ್ಯಾಸದ ಮೊತ್ತದ ಮೇಲೆ ಈ ಕೆಳಕಂಡ 4 ಮಂದಿ ನಿವೃತ್ತ ನ್ಯಾಯಾಧೀಶರಿಗೆ ಮತ್ತು ಇಬ್ಬರು ಮೃತ ನಿವೃತ್ತ ನ್ಯಾಯಾಧೀಶರ ಕುಟುಂಬದ 4 ಸದಸ್ಯರಿಗೆ ಬಡ್ಡಿಯನ್ನು ಮುಂದಿನಂತೆ ಪಾವತಿಸಲು ಈ ಮೂಲಕ ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

| ಕ್ರಮ ಸಂಖ್ಯೆ | ನಿವೃತ್ತ ನ್ಯಾಯಾಧೀಶರ ಹೆಸರು | ವ್ಯತ್ಯಾಸದ ಮೊತ್ತವನ್ನು ಪಾವತಿಸಿದ ದಿನಾಂಕ | ಪಾವತಿಸಬೇಕಾದ ಮೊತ್ತ |
|---|---|---|---|
| 1. | ಶ್ರೀ ಎಸ್.ಬಿ. ಮಜಿಗೆ | 19.12.2008 | 2097.00 |
| 2. | ಶ್ರೀ ಕೆ.ಆರ್.ಪ್ರಸಾದ್ ರಾವ್ | 19.12.2008 | 2097.00 |
| 3. | ಶ್ರೀ ಎನ್.ಎಸ್.ವೀರಭದ್ರಯ್ಯ | 19.12.2008 | 2097.00 |
| 4. | ಶ್ರೀಮತಿ ಸುಭದ್ರಮ್ಮ ಬಿನ್ ಲೇಟ್ ಬಿ.ಎಸ್.ಶ್ರೀನಿವಾಸರಾವ್ | 19.12.2008 | 2097.00 |
| 5. | ಶ್ರೀ ಎಮ್.ಎಮ್. ಮಿರ್ದೆ | 19.12.2008 | 2097.00 |
| 6. | ಶ್ರೀಮತಿ ಪಾರ್ವತಿ ಸಾಂಗ್ಲದ್ W/o Late B.K.Sangalad | 19.12.2008 | 2097.00 |
| 7. | ಶ್ರೀ ಅರವಿಂದ ಸಾಂಗ್ಲದ್ S/o Late B.K.Sangalad | 19.12.2009 | |
| 8. | ಶ್ರೀ ಅನತ ಪದ್ಮನಾಭ ಸಾಂಗ್ಲದ್ S/o Late B.K.Sangalad | 19.12.2009 | |

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2071–01–104–2–06 – Interest on belated Payment of DCRG (Charged) ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಟಿಪ್ಪಣಿ ಸಂ : ಆಇ 119 ಪಿಇಎನ್–1/2010, ದಿನಾಂಕ: 19.07.2010 ರನ್ವಯ ಆರ್ಥಿಕ ಇಲಾಖೆಯ ಸಹಮತ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಆರ್.ವಿಜಯಾನಂದ ಶರ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

(ಸೇವೆಗಳು–3)

ಪಿ.ಆರ್. 2373

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

**ವಿಷಯ :** ಕೇಂದ್ರ ಪುರಸ್ಕೃತ ಮಾದರಿ ಸಮೀಕ್ಷೆ ಯೋಜನೆಯನ್ನು ರಾಜ್ಯದ ವಿವಿಧ ಜಿಲ್ಲೆಗಳಿಗೆ ವಿಸ್ತರಿಸುವ ಸಲುವಾಗಿ ಅಗತ್ಯ ಹುದ್ದೆಗಳ ಮಂಜೂರಾತಿ ಬಗ್ಗೆ.

**ಓದಲಾಗಿದೆ :** (1) ಸರ್ಕಾರಿ ಆದೇಶ ಸಂಖ್ಯೆ: ಎಹೆಚ್‌ಎಫ್ 129 ಎಹೆಚ್‌ಪಿ 94, ಬೆಂಗಳೂರು, ದಿನಾಂಕ: 15–11–1995.

(2) ಕೇಂದ್ರ ಸರ್ಕಾರದ ಪತ್ರ ಸಂಖ್ಯೆ: 26–2/2007–AHS, ದಿನಾಂಕ: 24–2–2009.

(3) ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಪಪಾಇ/ಅಂಅಂ/ಸಿಬ್ಬಂದಿ/ವಿವ–40/2010–11, ದಿನಾಂಕ: 04–12–2009 ಮತ್ತು 09–04–2010.

(4) ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 65 ವೆ–4/2009, ದಿನಾಂಕ: 28–1–2010.

**ಪ್ರಸ್ತಾವನೆ :**

ಮೇಲೆ ಕ್ರಮಾಂಕ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಈ ಕೆಳಕಾಣಿಸಿದ 69 ವಿವಿಧ ಹುದ್ದೆಗಳನ್ನು ಯೋಜನೆಯಡಿಯಲ್ಲಿ ಈಗಾಗಲೇ ಸೃಜಿಸಲಾಗಿರುತ್ತದೆ. ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಭಾರತ ಸರ್ಕಾರದವರು ಕೇಂದ್ರ ಪುರಸ್ಕೃತ ಮಾದರಿ ಸಮೀಕ್ಷೆ ಯೋಜನೆಯಡಿಯಲ್ಲಿ ಈ ಕೆಳಕಾಣಿಸಿದ 64 ಹುದ್ದೆಗಳನ್ನು ಸೃಜಿಸಲು ಅನುಮೋದಿಸಿರುತ್ತಾರೆ.

| | |
|---|---|
| **At State Headquarters** | |
| 1) Joint Director (Statistics) | 1 |
| 2) Deputy Director (Statistics) | 2 |
| 3) Computer Operator | 2 |
| **At District Level** | |
| 4) Assistant Director | 8 |
| 5) Supervisor –cum-Data Entry Operator | 15 |
| 6) Enumerator | 36 |
| **Total** | **64** |

ಮೇಲೆ ಕ್ರಮಾಂಕ(3)ರಲ್ಲಿ ಓದಲಾದ ದಿನಾಂಕ: 04–12–2009 ಮತ್ತು 09–04–2010ರ ಪತ್ರಗಳಲ್ಲಿ ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು ಇವರು ಮೇಲೆ ಕ್ರಮಾಂಕ(1)ರಲ್ಲಿ ಕಾಣಿಸಲಾದಂತೆ ಈಗಾಗಲೇ ಯೋಜನೆಯಡಿಯಲ್ಲಿ ಸೃಜಿಸಲಾಗಿರುವ 69 ಹುದ್ದೆಗಳನ್ನು ಮರುವಿನ್ಯಾಸಗೊಳಿಸಿ ಕೇಂದ್ರ ಸರ್ಕಾರದ Norms ಅನ್ವಯ 64 ಹುದ್ದೆಗಳನ್ನಾಗಿ ಪರಿವರ್ತಿಸಲು ಹಾಲಿ ಇರುವ ಹುದ್ದೆಗಳ ಪೈಕಿ 27 ಹುದ್ದೆಗಳನ್ನು ರದ್ದುಗೊಳಿಸಿ 22 ಹುದ್ದೆಗಳನ್ನು ಸೃಷ್ಟಿಸಲು ಅನುಮೋದಿಸಲಾಗಿದೆ. ಆದರೆ, ಈ ಸಂಬಂಧ ನಮೂದಿಸಿರುವ ಕೆಲವೊಂದು ಹುದ್ದೆಗಳ ಪದನಾಮವು ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯಲ್ಲಿ ಇಲ್ಲದಿರುವ ಕಾರಣ ಅವುಗಳಿಗೆ ಬದಲಾಗಿ ಹುದ್ದೆಗಳ ಪದನಾಮವನ್ನು ಬದಲಾವಣೆ ಮಾಡಿ ಪರಿಷ್ಕರಿಸಬೇಕೆಂದು ಹಾಗೂ ಕೆಲವೊಂದು ಹುದ್ದೆಗಳನ್ನು ಯೋಜನೆಯಡಿಯಿಂದ ಯೋಜನೇತರಡಿಗೆ ವರ್ಗಾಯಿಸಿ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಮೇಲೆ ಕ್ರಮಾಂಕ(4) ರಲ್ಲಿ ಓದಲಾದ ಟಿಪ್ಪಣಿಯಲ್ಲಿ ಆರ್ಥಿಕ ಇಲಾಖೆಯು ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯಲ್ಲಿನ ಸಾಂಖ್ಯಿಕ ಶಾಖೆಯಲ್ಲಿ ಯೋಜನಾ ಶಿರ್ಷಿಕೆಯಡಿಯಲ್ಲಿ ಮಂಜೂರಾಗಿರುವ 69 ಹುದ್ದೆಗಳನ್ನು ಮುರುವಿನ್ಯಾಸಗೊಳಿಸಿ ಕೇಂದ್ರ ಸರ್ಕಾರದ Norms ಅನ್ವಯ 64 ಹುದ್ದೆಗಳನ್ನಾಗಿ ಪರಿವರ್ತಿಸಲು ಹಾಲಿ ಇರುವ ಹುದ್ದೆಗಳ ಪೈಕಿ ಈ ಕೆಳಗೆ ನಮೂದಿಸಿರುವಂತೆ 27 ಹುದ್ದೆಗಳನ್ನು ರದ್ದುಗೊಳಿಸಿ 22 ಹುದ್ದೆಗಳನ್ನು ಸೃಷ್ಟಿಸಲು ಅನುಮೋದಿಸಿದೆ ಹಾಗೂ ಯೋಜನೇತರ ಹುದ್ದೆಗಳ ಪೈಕಿ ಹಾಲಿ ಮಂಜೂರಾಗಿರುವ 01 ಜಂಟಿ ನಿರ್ದೇಶಕರ ಹಾಗೂ 02 ಸಹಾಯಕ ನಿರ್ದೇಶಕರ ಹುದ್ದೆಗಳನ್ನು ರದ್ದುಗೊಳಿಸಿದೆ. ಉಳಿದಂತೆ ಹಾಲಿ ಮಂಜೂರಾಗಿರುವ ಯೋಜನೇತರ ಹುದ್ದೆಗಳಲ್ಲಿನ ಮರುವಿನ್ಯಾಸದ ಪ್ರಸ್ತಾವನೆಗೆ ಅನುಮೋದನೆ ನೀಡಿರುವುದಿಲ್ಲ.

**Integrated sample survey (ISS)/GOI Scheme. No. of posts required tobe sanctioned under Plan**

| Sl. No. | Designation/post | Existing | Required as per GOI guidelines | No- of posts approved for creation | Abolished |
|---|---|---|---|---|---|
| **State Headquarters** | | | | | |
| 1 | Joint Director (Statistics) | - | 1 | 1 | - |
| 2 | Deputy Director (Statistics) (18150-26925) | - | 2 | 2 | - |
| 3 | Supervisor/DEO (10000-18150) | 2 | - | - | 2 |
| 4 | Computer Operator/ Field Investigator (7275-13350) | 4 | 2 | - | 2 |

| | | | | | |
|---|---|---|---|---|---|
| 5 | Veterinary Asst. (5800-10500) | 4 | - | - | 4 |
| 6 | Admin. Asst. (11400-21600) | 1 | - | - | 1 |
| 7 | Stenographer (7275-10500) | 1 | - | - | 1 |
| 8 | Driver (5800-10500) | 1 | - | - | 1 |
| | **Total** | 13 | 5 | +3 | -11 |
| **District Officers** | | | | | |
| 1 | Asst. Director (11400-21600) | - | 8 | 8 | - |
| 2 | Supervisor/DEO (10000-18150) | 4 | 15 | 11 | - |
| 3 | Enumerator (4500-10500) | 40 | 36 | - | 4 |
| 4 | First Div. Asst. (7275-13350) | 4 | - | - | 4 |
| 5 | Typist (5800-10500) | 4 | - | - | 4 |
| 6 | Group D (4800-7275) | 4 | - | - | 4 |
| | **Total** | 56 | 59 | 19 | 16 |
| | **Grand Total** | 69 | 64 | +22 | -27 |

**ಆದೇಶ ಸಂಖ್ಯೆ : ಪಸಂಮೀ 91 ಪಪಾಯೋ 2008, ಬೆಂಗಳೂರು, ದಿನಾಂಕ : 23–08–2010**

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ, ಪಶುಪಾಲನೆ ಮತ್ತು ಪಶುವೈದ್ಯ ಸೇವಾ ಇಲಾಖೆಯಲ್ಲಿ ಪ್ರಸ್ತುತ ಚಾಲ್ತಿಯಲ್ಲಿರುವ ಕೇಂದ್ರ ಪುರಸ್ಕೃತ ಯೋಜನೆಯಡಿಯಲ್ಲಿನ ಮಾದರಿ ಸಮೀಕ್ಷಾ ಯೋಜನೆಯನ್ನು ರಾಜ್ಯದ 30 ಜಿಲ್ಲೆಗಳಿಗೂ ವಿಸ್ತರಿಸುವುದಕ್ಕಾಗಿ ಅಗತ್ಯವಾದ ವಿವಿಧ ವೃಂದದ 64 ಹುದ್ದೆಗಳಲ್ಲಿ ಕೆಲವೊಂದು ಹುದ್ದೆಗಳ ಪದನಾಮಗಳನ್ನು ಈ ಕೆಳಗೆ ನಮೂದಿಸಿರುವಂತೆ ಪರಿಷ್ಕರಿಸಿ ಬದಲಾಯಿಸಲು ಅನುಮತಿ ನೀಡಲಾಗಿದೆ.

| | |
|---|---|
| **State Headquarters** | |
| 1) Joint Director (Statistics) | 1 |
| 2) Deputy Director (Statistics) | 2 |
| 3) Computer Operator / Field Investigator / Statistical Inspector (S.I.) | 2 |
| **District Level** | |
| 4) Assistant Director | 8 |
| 5) Supervisor –cum-Data Entry Operator / Assistant Statistical Officer (A.S.O.) | 15 |
| 6) Enumerator / Veterinary Inspector | 36 |
| **Total** | **64** |

ಪ್ರಸ್ತಾವನೆಯಲ್ಲಿ ತಿಳಿಸಿರುವಂತೆ ಯೋಜನಾ ಶೀರ್ಷಿಕೆ ಅಡಿ ರದ್ದುಗೊಳಿಸಿರುವ (ವೆಟರಿನರಿ ಅಸಿಸ್ಟೆಂಟ್–4, ಆಡಳಿತ ಸಹಾಯಕರು–1, ಶೀಘ್ರಲಿಪಿಗಾರರು–1 ಹಾಗೂ ವಾಹನ ಚಾಲಕ–1) ಒಟ್ಟು 7 ಹುದ್ದೆಗಳನ್ನು ಯೋಜನೇತರ ಶೀರ್ಷಿಕೆಗೆ ವರ್ಗಾಯಿಸಲು ಕೋರಿದ್ದು, ಆ ಹುದ್ದೆಗಳನ್ನು ಈಗಾಗಲೇ ಮರು ವಿನ್ಯಾಸಗೊಳಿಸಿರುವುದರಿಂದ, ಯೋಜನೇತರಕ್ಕೆ ವರ್ಗಾಯಿಸಲು ಬರುವುದಿಲ್ಲ.

ಯೋಜನೇತರಡಿ ಮಂಜೂರಾಗಿರುವ ಪ್ರಥಮ ದರ್ಜೆ ಸಹಾಯಕರ ಹಾಗೂ ಎರಡನೇ ದರ್ಜೆ ಸಹಾಯಕರ ತಲಾ ಒಂದು ಹುದ್ದೆಗಳನ್ನು ಶೀಘ್ರಲಿಪಿಗಾರರ ಹಾಗೂ ವಾಹನ ಚಾಲಕರ ಹುದ್ದೆಗಳಾಗಿ ಪರಿವರ್ತಿಸಲು ಪ್ರಸ್ತಾಪಿಸಿದ್ದನ್ನು ಎರಡೂ ಹುದ್ದೆಗಳ ವೇತನ ಶ್ರೇಣಿಗಳು ಒಂದೇ ಆಗಿರುವ ಕಾರಣ ಅನುಮೋದನೆ ನೀಡಲಾಗಿದೆ.

ಯೋಜನಾ ಶೀರ್ಷಿಕೆ ಅಡಿ ಸೃಷ್ಟಿಸಿರುವ ಪ್ರಥಮ ದರ್ಜೆ ಸಹಾಯಕ, ಬೆರಳಚ್ಚುಗಾರ ಹಾಗೂ ಡಿ–ದರ್ಜೆಯ ತಲಾ 4 ಹುದ್ದೆಗಳನ್ನು ವಿಭಾಗ ಮಟ್ಟದ ಕಛೇರಿಗಳಿಗೆ ಅವಶ್ಯವಿರುವುದರಿಂದ ಯೋಜನೇತರಕ್ಕೆ ವರ್ಗಾಯಿಸಲು ಕೋರಿರುವ ಸಂಬಂಧ ಭಾರತ ಸರ್ಕಾರ ನಿಗದಿಪಡಿಸಿರುವ ನೀತಿಯಂತೆ ಅವಶ್ಯ ಹುದ್ದೆಗಳನ್ನು ಯೋಜನೆ ಅಡಿ ಸೃಷ್ಟಿಸಿರುವುದರಿಂದ, ಈ ಹುದ್ದೆಗಳನ್ನು ಯೋಜನೇತರಕ್ಕೆ ವರ್ಗಾಯಿಸಲು ಬರುವುದಿಲ್ಲ.

ಆ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿಗಳ ಸಂಖ್ಯೆ:ಆಇ 65 ವೆ–4/2009, ದಿನಾಂಕ: 28–1–2010 ಮತ್ತು ಆಇ 65 ವೆ–4/2007 ದಿನಾಂಕ: 1–7–2010ರನ್ವಯ ಸಹಮತಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ. ಕೆ. ಶ್ರೀನಿವಾಸಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿಗಳು
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ (ಪಶುಸಂಗೋಪನೆ)

ಪಿ.ಆರ್. 2374

## COMMERCE & INDUSTRIES SECRETARIAT

**Sub :** Change of location for the project proposal of M/s Target Corporation India (P) Ltd. from Koorgalli Industrial Area, Mysore to KIADB Industrial Area, Devanahalli-Reg.

**Read :** 1. State High Level Clearance Committee meeting held on 23.02.2007

2. Govt. Order No. ITD 06 MDA 2007 (5) dated: 29.05.2007.

3. Proceedings of the 161st State High Level Screening Committee meeting held on 04.08.2010 under the chairmanship of the Hon'ble Minister for Large & Medium Industries.

M/s Target Corporation India (P) Ltd. had Submitted a proposal to establish an IT Park / Software Development Centre at Koorgalli Industrial Area. Mysore in February 2007. SHLCC in its meeting held on 23.2.2007 has approved the project and recommended for allotment of 21 acres of lands at Koorgalli/Ilwala Belagola I.A., Mysore. Accordingly, Govt. Order read above at (2) was issued.

Revised allotment letter for 21 acres of land in plot No.4 of Koorgalli I.A., Mysore was issued on 10.5.2007.

Since, the lands were under litigation, company has surrendered the land on 15th Feb 2010.

Now, M/s Target Corporation India (P) Ltd. has requested for change of location and allotment of 10 acres of land in IT Park, KIADB Industrial Area, Devanahalli Taluk, Bangalore Rural Dist. Government has examined the request in detail.

Hence this Order.

**GOVT. ORDER NO : CI 445 SPI 2010 BANGALORE, DATED : 7TH SEPT. 2010**

The Government is pleased to accord approval for change of location from Koorgalli industrial Area, Mysore to KIADB Industrial Area, Devanahalli, Bangalore Rural District for establishment of an IT Park / Software Development Centre by M/s Target Corporation India (P) Ltd. and for allotment of 10 acres of land at IT Park-KIADB Industrial Area near Bangalore International Airport, Bangalore Rural District for the project.

This approval is valid for 2 years from the date of issue of this Order.

By order and in the name of the Governor of Karnataka,

**A.V.Srinivasa Dikshit**

Desk Officer (Technical Cell)

Commerce & Industries Dept.

P.R. 2375

## ಕಂದಾಯ ಸಚಿವಾಲಯ

**ವಿಷಯ :** 2010ನೇ ಸಾಲಿನಲ್ಲಿ ಪ್ರಕೃತಿ ವಿಕೋಪ ಪರಿಹಾರ ಕಾರ್ಯಗಳಿಗೆ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** ಜಿಲ್ಲಾಧಿಕಾರಿಗಳಿಂದ ಬಂದಿರುವ ಬೇಡಿಕೆ ಪತ್ರಗಳು.

**ಪ್ರಸ್ತಾವನೆ :**

ರಾಜ್ಯದಲ್ಲಿ ಇತ್ತೀಚಿಗೆ ಬಿದ್ದ ಭಾರಿ ಮಳೆಯಿಂದ ಮಾನವ ಹಾನಿ, ಜಾನುವಾರು ಹಾನಿ, ಮನೆ ಹಾನಿ ಹಾಗೂ ಮೂಲಭೂತ ಸೌಲಭ್ಯಗಳು ಹಾನಿಯಾಗಿರುವುದು ವರದಿಯಾಗಿದೆ. ಈ ಹಿನ್ನಲೆಯಲ್ಲಿ, ತುರ್ತು ಪರಿಹಾರ ಕ್ರಮಗಳನ್ನು ಕೈಗೊಳ್ಳಲು ಜಿಲ್ಲಾಧಿಕಾರಿಗಳಿಗೆ ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಅನುದಾನ ಬಿಡುಗಡೆ ಮಾಡಲು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 180 ಟಿಎನ್‌ಆರ್ 2010 (ಭಾಗ–1), ಬೆಂಗಳೂರು, ದಿನಾಂಕ : 26–08–2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಪ್ರಕೃತಿ ವಿಕೋಪ ಪರಿಹಾರಕ್ಕಾಗಿ ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಈ ಕೆಳಕಂಡಂತೆ ಜಿಲ್ಲೆಗಳ ಜಿಲ್ಲಾಧಿಕಾರಿಗಳಿಗೆ ಅನುದಾನ ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

| ಕ್ರ. ಸಂ. | ಜಿಲ್ಲೆಯ ಹೆಸರು | ಬಿಡುಗಡೆ ಮಾಡಿದ ಅನುದಾನ (ರೂ. ಲಕ್ಷಗಳಲ್ಲಿ) |
|---|---|---|
| 1 | ಉತ್ತರ ಕನ್ನಡ | 100.00 |
| 2 | ಕೊಡಗು | 150.00 |
| 3 | ದಾವಣಗೆರೆ | 50.00 |
| 4 | ದಕ್ಷಿಣ ಕನ್ನಡ | 100.00 |
| 5 | ಕೋಲಾರ | 50.00 |
| 6 | ಚಿಕ್ಕಬಳ್ಳಾಪುರ | 50.00 |
| 7 | ಬಳ್ಳಾರಿ | 100.00 |
| 8 | ಗುಲ್ಬರ್ಗಾ | 100.00 |
| 9 | ಕೊಪ್ಪಳ | 100.00 |
| | **ಒಟ್ಟು** | **800.00** |

(ರೂ. ಎಂಟುನೂರು ಲಕ್ಷಗಳು ಮಾತ್ರ)

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು ಪ್ರಕೃತಿ ವಿಕೋಪ ಪರಿಹಾರ ನಿಯಾಮಾನುಸಾರ ಉಪಯೋಗಿಸಿಕೊಳ್ಳತಕ್ಕದ್ದು.

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು ಸಂಬಂಧಪಟ್ಟ ಜಿಲ್ಲೆಯ ಜಿಲ್ಲಾಧಿಕಾರಿಗಳು ಪೇಯೀಸ್ ರಸೀದಿ ಬಿಲ್ಲುಗಳನ್ನು ತಯಾರಿಸಿ ಮೇಲು ರುಜು ಮಾಡಿ ಜಿಲ್ಲಾ ಖಜಾನೆಯಿಂದ ಡ್ರಾ ಮಾಡಿ ಸಿ.ಆರ್.ಎಫ್. ಪಿಡಿ ಖಾತೆಗೆ ಜಮಾ ಮಾಡಿದ ನಂತರ ಪರಿಹಾರ ಕಾರ್ಯಗಳಿಗೆ ಉಪಯೋಗಿಸಿಕೊಳ್ಳತಕ್ಕದ್ದು.

ಮೇಲಿನಂತೆ ಬಿಡುಗಡೆ ಮಾಡಿರುವ ಮೊತ್ತವನ್ನು 2009–10ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 2245–01–102–0–00–100 (ಯೋಜನೇತರ) ಅಡಿಯಲ್ಲಿ ಭರಿಸತಕ್ಕದ್ದು.

ಅನುದಾನ ವೆಚ್ಚ ಮಾಡುವಾಗ ಸರ್ಕಾರವು ಕಾಲ ಕಾಲಕ್ಕೆ ಹೊರಡಿಸಿರುವ ಮಾರ್ಗಸೂಚಿ/ ಅದೇಶ/ ಸುತ್ತೋಲೆಗಳನ್ನು ಪಾಲಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆ ಟಿಪ್ಪಣಿಯ ಸಂಖ್ಯೆ:ಆಇ:347:ವೆಚ್ಚ–7/2010, ದಿನಾಂಕ: 9/6/10 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ. ಗಂಗಾಧರ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ
(ವಿಪತ್ತು ನಿರ್ವಹಣೆ ಮತ್ತು ಸೇವೆಗಳು–2)

ಪಿ.ಆರ್. 2376

## ಕಂದಾಯ ಸಚಿವಾಲಯ

**ವಿಷಯ** : ಬಾಗಲಕೋಟೆ ತಾಲ್ಲೂಕಿನಲ್ಲಿ ಕಾರ್ಯನಿರ್ವಹಿಸಿದ ತಹಶೀಲ್ದಾರರುಗಳ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಗಳನ್ನು ನೇಮಿಸುವ ಕುರಿತು ಆದೇಶ.

**ಓದಲಾಗಿದೆ :** (1) ಜಿಲ್ಲಾಧಿಕಾರಿಗಳು, ಬಾಗಲಕೋಟೆ ಜಿಲ್ಲೆ, ಬಾಗಲಕೋಟೆ ಇವರ ಪ್ರಸ್ತಾವನೆ ಸಂಖ್ಯೆ: ಆರ್‌ಬಿ/ಇಎಸ್ ಟಿ/3/ಸಿಆರ್/43/07–08 ದಿನಾಂಕ: 1–2–2008.

(2) ಸರ್ಕಾರದ ಕಾರಣ ಕೇಳುವ ಸೂಚನಾ ಪತ್ರ ಸಂಖ್ಯೆ: ಕಂಇ 07 ಎಡಿಇ 2008 ದಿನಾಂಕ: 26–11–2008.

(3) ಶ್ರೀ ಎನ್.ವೈ. ಚಿಕ್ಕೊಂಡ, ನಿವೃತ್ತ ತಹಶೀಲ್ದಾರ್ ಇವರು ಸಲ್ಲಿಸಿರುವ ದಿನಾಂಕ: 12–12–2008ರ ಲಿಖಿತ ಹೇಳಿಕೆ.

(4) ಶ್ರೀ ರೇವಯ್ಯನವರ, ನಿವೃತ್ತ ತಹಶೀಲ್ದಾರ್ ಇವರು ಸಲ್ಲಿಸಿರುವ ದಿನಾಂಕ: 16–12–2008ರ ಲಿಖಿತ ಹೇಳಿಕೆ.

(5) ಶ್ರೀ ಎಸ್.ಡಿ. ಘೀವಾರಿ, ನಿವೃತ್ತ ತಹಶೀಲ್ದಾರ್ ಇವರು ಸಲ್ಲಿಸಿರುವ ದಿನಾಂಕ: 20–3–2009ರ ಲಿಖಿತ ಹೇಳಿಕೆ.

(6) ಶ್ರೀ ಟಿ.ಜಿ. ಪಾಟೀಲ, ನಿವೃತ್ತ ತಹಶೀಲ್ದಾರ್ ಇವರು ಸಲ್ಲಿಸಿರುವ ದಿನಾಂಕ: 31–12–2008ರ ಲಿಖಿತ ಹೇಳಿಕೆ.

(7) ಶ್ರೀ ಎಸ್.ಸಿ. ಮಿಣಜಿಗಿ, ನಿವೃತ್ತ ತಹಶೀಲ್ದಾರ್ ಮತ್ತು ಇವರು ಸಲ್ಲಿಸಿರುವ ದಿನಾಂಕ: 10–12–2008ರ ಲಿಖಿತ ಹೇಳಿಕೆ.

(8) ಶ್ರೀ ಕೆ. ಭೀಮರಾವ್, ಸೇವೆಯಲ್ಲಿರುವ ತಹಶೀಲ್ದಾರ್ ಇವರು ಸಲ್ಲಿಸಿರುವ ದಿನಾಂಕ: 17–12–2008ರ ಲಿಖಿತ ಹೇಳಿಕೆ.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ: (1) ರಲ್ಲಿ ಜಿಲ್ಲಾಧಿಕಾರಿಗಳು, ಬಾಗಲಕೋಟೆ ಜಿಲ್ಲೆ, ಬಾಗಲಕೋಟೆ ಇವರು ಬಾಗಲಕೋಟೆ ಜಿಲ್ಲೆಯ ಬಾಗಲಕೋಟೆ ತಾಲ್ಲೂಕಿನ ಸಿಮಿಕೇರಿ ಗ್ರಾಮದ ರಿ.ಸರ್ವೆ ನಂ. 147/9 ಕ್ಷೇತ್ರ 4.31 ಹಾಗೂ ರಿ. ಸರ್ವೆ ನಂ. 147/10 ಕ್ಷೇತ್ರ 3.10 ಜಮೀನುಗಳ ಕ್ಷೇತ್ರದ ಶ್ರೀ ಅಪ್ಪಣ್ಣ ಗಿರಿಯಪ್ಪ ಕೋರಡ್ಡಿ, ಸಾ: ಕೆರಕಲಮಟ್ಟಿ ಇವರು ದಾಖಲೆಗಳನ್ನು ತಿದ್ದಿಕೊಂಡು ಬಾಗಲಕೋಟೆ ಸಿವಿಲ್ ನ್ಯಾಯಾಲಯಕ್ಕೆ ದಿನಾಂಕ: 12–12–94 ರಂದು ದಾವಾ ಸಂಖ್ಯೆ: 193/94 ಹೂಡಿ ಸೀಮಿಕೇರಿ ಗ್ರಾಮದ ರಿ.ಸರ್ವೆ ನಂ. 147/9 ರ ಕ್ಷೇತ್ರ 14.31 ಹಾಗೂ 147/10 ರ ಕ್ಷೇತ್ರ 13.10 ಇರುವುದೆಂದು ಆ ಪ್ರಕಾರ ಬದಲಾವಣೆ ಮಾಡಿಸಲು ಮೊರೆ ಹೋಗಿದ್ದು, ಈ ವಿಷಯದಲ್ಲಿ ಹಿಂದಿನ ತಹಶೀಲ್ದಾರರಾದ ಶ್ರೀ ಡಿ.ಜಿ. ಪಾಟೀಲ ಹಾಗೂ ಶ್ರೀ ಎಸ್.ಸಿ. ಮಿಣಜಗಿ, ಸದ್ಯ ನಿವೃತ್ತರು ಇವರು ಸಿವಿಲ್ ನ್ಯಾಯಾಲಯಕ್ಕೆ ಯಾವುದೇ ಪೂರಕ ದಾಖಲೆಗಳನ್ನಾಗಲೀ ಹಾಗೂ ಹೇಳಿಕೆಯನ್ನು ನೀಡದೇ ಇರುವುದರಿಂದ, ದಾವಾ ಸಂಖ್ಯೆ: 193/94 ದಿನಾಂಕ: 24–9–1997 ರಂದು ಶ್ರೀ ಅಪ್ಪಣ್ಣ ಗಿರಿಯಪ್ಪ ಕೋರಡ್ಡಿ ಇವರಂತೆ ಡಿಕ್ರಿ ಆದೇಶ ಆಗಿರುತ್ತದೆ. ಈ ಅವಧಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ತಹಶೀಲ್ದಾರರಾದ ಶ್ರೀ ಡಿ.ಜಿ. ಪಾಟೀಲ ಹಾಗೂ ಶ್ರೀ ಎಸ್.ಸಿ. ಮಿಣಜಗಿ, ಇವರ ಬೇಜವಾಬ್ದಾರಿತನದಿಂದ ದಿನಾಂಕ: 24–9–1997 ರಂದು ಸರ್ಕಾರದ ವಿರುದ್ಧ ತೀರ್ಮಾನವಾಗಿರುತ್ತದೆ. ಈ ತೀರ್ಮಾನದ ವಿರುದ್ಧ ಅಪೀಲು ಮಾಡುವಲ್ಲಿ ವಿಳಂಬ ಉಂಟು ಮಾಡಿದ ಆಗಿನ ತಹಶೀಲ್ದಾರರಾದ ಶ್ರೀ ಎನ್. ವೈ. ಚಿಕ್ಕೊಂಡ, ಶ್ರೀ ಆರ್.ಎಸ್. ರೇವಯ್ಯನವರ ಹಾಗೂ ಶ್ರೀ ಎಸ್.ಡಿ. ಘೀವಾರಿ ಇವರು ಎಲ್ಲಾ ನಿವೃತ್ತರಾಗಿದ್ದು, ಹಾಗೂ ಶ್ರೀ ಕೆ. ಭೀಮರಾವ್ ರವರು ಸದರಿ ಅವಧಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ ಓ.ಎಸ್. ಸಂಖ್ಯೆ: 193/94 ರ ಬಗ್ಗೆ ನಿಗದಿತ ಅವಧಿಯಲ್ಲಿ ಅಪೀಲು ಮಾಡಲು ಯಾವುದೇ ಕ್ರಮ ಕೈಗೊಂಡಿರುವುದಿಲ್ಲ. ನಂತರ ಅಪೀಲು ಮಾಡಿದರೂ ಉಚ್ಚ ನ್ಯಾಯಾಲಯವು 1056 ದಿವಸ ತಡವಾಗಿ ಮಾಡಿದ ಅಪೀಲು ಸಂಖ್ಯೆ: ಆರ್.ಎ.6/02 ರ ದಿನಾಂಕ: 9–4–2003 ರ ಮೇಲ್ಮನವಿ ಆದೇಶದಲ್ಲಿ ಅಪೀಲು ತಿರಸ್ಕೃತಗೊಂಡಿರುತ್ತದೆ. ನ್ಯಾಯಾಲಯವು ನಿಗದಿತ ಅವಧಿಯಲ್ಲಿ ಅಪೀಲು ಮಾಡದೇ ಇರುವ ಅಧಿಕಾರಿಗಳ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳಬೇಕೆಂದು ಆದೇಶ ಇರುವುದರಿಂದ, ಬಾಗಲಕೋಟೆ ಜಿಲ್ಲಾಧಿಕಾರಿಗಳು ತಯಾರಿಸಿ ಕಳುಹಿಸಿದ ದೋಷಾರೋಪಣ ಪಟ್ಟಿಗಳನ್ನು ಆಪಾದಿತ ನಿವೃತ್ತ ಹಾಗೂ ಸೇವೆಯಲ್ಲಿರುವ ಎಲ್ಲಾ ಅಧಿಕಾರಿಗಳ ಮೇಲೆ ಕ್ರಮ ಕೈಗೊಳ್ಳಲು ಹಾಗೂ ದಾಖಲೆಗಳೊಂದಿಗೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (2) ರಂತೆ ಸರ್ಕಾರದಿಂದ ದಿನಾಂಕ: 26–11–2008 ರಂದು ಆಪಾದಿತ ನೌಕರರಾದ (1) ಶ್ರೀ ಎನ್. ವೈ ಚಿಕ್ಕೊಂಡ, ನಿವೃತ್ತ ತಹಶೀಲ್ದಾರ್ (2) ಶ್ರೀ ರೇವಯ್ಯನವರ, ನಿವೃತ್ತ ತಹಶೀಲ್ದಾರ್ (3) ಶ್ರೀ ಎಸ್.ಡಿ. ಘೀವಾರಿ, ನಿವೃತ್ತ ತಹಶೀಲ್ದಾರ್ (4) ಶ್ರೀ ಡಿ.ಜಿ.ಪಾಟೀಲ, ನಿವೃತ್ತ ತಹಶೀಲ್ದಾರ್ (5) ಶ್ರೀ ಎಸ್.ಸಿ. ಮಿಣಜಿಗಿ, ನಿವೃತ್ತ ತಹಶೀಲ್ದಾರ್ ಮತ್ತು (6) ಶ್ರೀ ಕೆ. ಭೀಮರಾವ್, ಸೇವೆಯಲ್ಲಿರುವ ತಹಶೀಲ್ದಾರ್ ಇವರುಗಳಿಗೆ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲಾಗಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (3) ರಿಂದ (8) ರವರೆಗಿನ ಈ ಕೆಳಗಿನ ಆಪಾದಿತ ತಹಶೀಲ್ದಾರರುಗಳು ಲಿಖಿತ ಹೇಳಿಕೆಗಳನ್ನು ಸಲ್ಲಿಸಿದ್ದು, ಸದರಿ ಹೇಳಿಕೆಗಳನ್ನು ಕೂಲಂಕಷವಾಗಿ ಪರಿಶೀಲಿಸಲಾಗಿ ಎಲ್ಲಾ ಆಪಾದಿತ ತಹಶೀಲ್ದಾರರುಗಳು ತಮ್ಮ ವಿರುದ್ಧದ ಆರೋಪಗಳನ್ನು ಅಲ್ಲಗಳೆದಿರುತ್ತಾರೆ.

ಈ ಆರು ಜನ ಅಧಿಕಾರಿಗಳು ಕರ್ತವ್ಯ ನಿರ್ವಹಿಸಿದ ಮತ್ತು ನಿವೃತ್ತಿ ಹೊಂದಿದ ದಿನಾಂಕಗಳು ಈ ಕೆಳಕಂಡಂತೆ ಇರುತ್ತವೆ:

| ಕ್ರ. ಸಂ. | ಹೆಸರು/ವಿಳಾಸ | ಅವಧಿ | ನಿವೃತ್ತಿ ದಿನಾಂಕ |
|---|---|---|---|
| 1 | ಶ್ರೀ ಡಿ.ಜಿ.ಪಾಟೀಲ, ನಿವೃತ್ತ ತಹಶೀಲ್ದಾರ್, ಸಾ:ತಂಗಡಗಿ ತಾ: ಮುದ್ದೇಬಿಹಾಳ ಜಿಲ್ಲಾ: ವಿಜಾಪುರ | 18–10–1993 ರಿಂದ 31–8–1995 | 31–8–1995 |
| 2 | ಶ್ರೀ ಎಸ್.ಸಿ. ಮಿಣಜಗಿ, ನಿವೃತ್ತ ತಹಶೀಲ್ದಾರ್, ಹೌಸಿಂಗ್ ಕಾಲನಿ, ಬಾಗಲಕೋಟೆ | 6–10–1995 ರಿಂದ 31–5–1998 | 31–5–1998 |
| 3 | ಶ್ರೀ ಎನ್.ವೈ. ಚಿಕ್ಕೊಂಡ, ನಿವೃತ್ತ (ಪ್ರಭಾರ) ತಹಶೀಲ್ದಾರ್ ಬ. ಬಾಗೇವಾಡಿ, ಜಿ: ಬಿಜಾಪುರ | 1–6–1999 ರಿಂದ 6–9–1998 ಹಾಗೂ 9–3–1999 ರಿಂದ 4–7–1999 | 31–5–2006 |
| 4 | ಶ್ರೀ ರೇವಯ್ಯನವರ, ನಿವೃತ್ತ ತಹಶೀಲ್ದಾರ್, ಸಾ: ಬೆಳವಡಿ ತಾ: ಬೈಲಹೊಂಗಲ, ಜಿ: ಬೆಳಗಾವಿ | 5–7–1999 ರಿಂದ 16–5–2001 | 28–2–2002 |
| 5 | ಶ್ರೀ ಎಸ್.ಪಿ. ಘೀವಾರಿ, ನಿವೃತ್ತ ತಹಶೀಲ್ದಾರ್, ಹೌಸಿಂಗ್ ಕಾಲೋನಿ, ನವನಗರ ಹುಬ್ಬಳ್ಳಿ, ಜಿಲ್ಲಾ: ಧಾರವಾಡ | 16–5–2001 ರಿಂದ 17–8–2003 | 30–1–2006 |
| 6 | ಶ್ರೀ ಕೆ. ಭೀಮರಾವ್, ಸೇವೆಯಲ್ಲಿ ಇರುತ್ತಾರೆ | 7–9–1998 ರಿಂದ 20–1–1999 | ಸೇವೆಯಲ್ಲಿ ಇರುತ್ತಾರೆ |

ಶ್ರೀ ಅಪ್ಪಣ್ಣ ಗಿರಿಯಪ್ಪ ಕೋರಡ್ಡಿ ಇವರು ಬಾಗಲಕೋಟೆ ತಾಲ್ಲೂಕಿನ ಸಿಮಿಕೇರಿ ಗ್ರಾಮದ ರಿ.ಸರ್ವೆ ನಂ. 147/9 ಕ್ಷೇತ್ರ 4.31 ಹಾಗೂ ರಿ.ಸರ್ವೆ ನಂ. 147/10 ಕ್ಷೇತ್ರ 3.10 ಇದ್ದುದನ್ನು 14.37 ಹಾಗೂ 13.10 ಎಂದು ತಿದ್ದುಪಡಿ ಮಾಡಿರುವುದರಿಂದ, ಸರ್ಕಾರಕ್ಕೆ 20 ಎಕರೆ ಜಮೀನು ನಷ್ಟವಾಗಿರುವುದು ಕಂಡುಬಂದಿದ್ದು, ನ್ಯಾಯಾಲಯದ ಆದೇಶದಂತೆ ಈ ಮೇಲಿನ ನಿವೃತ್ತ ಹಾಗೂ ಸೇವೆಯಲ್ಲಿರುವ ಅಧಿಕಾರಿಗಳ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳಲು ನಿವೃತ್ತ ನ್ಯಾಯಾಧೀಶರಾದ ಶ್ರೀ ಜಿ.ಸಿ. ಗುಡ್ಡಾಕಾರ್ ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮತ್ತು ತಹಶೀಲ್ದಾರ್, ಬಾಗಲಕೋಟೆ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲು ಸರ್ಕಾರವು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 07 ಎಡಿಇ 2008, ಬೆಂಗಳೂರು, ದಿನಾಂಕ: 30–6–2010**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, 1957 ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 13 ಹಾಗೂ ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 214 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಈ ಕೆಳಕಂಡ ಆಪಾದಿತ ತಹಶೀಲ್ದಾರರುಗಳ ವಿರುದ್ಧ ಬಾಗಲಕೋಟೆಯಲ್ಲಿ ಇಲಾಖಾ ವಿಚಾರಣೆ ನಡೆಸಲು ಶ್ರೀ ಘ.ಸಿ. ಗುಡ್ಡಾಕಾರ, ನಿವೃತ್ತ ನ್ಯಾಯಾಧೀಶರು, ಗಣಪತಿ ಗುಡಿ ಹತ್ತಿರ, ಸಂಗೊಳ್ಳಿ ರಾಯಣ್ಣ ನಗರ, ಧಾರವಾಡ–580002 ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮತ್ತು 1957 ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11(5) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ತಹಶೀಲ್ದಾರ್, ಬಾಗಲಕೋಟೆ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

| ಕ್ರ.ಸಂ. | ಹೆಸರು/ವಿಳಾಸ |
|---|---|
| 1 | ಶ್ರೀ ಡಿ.ಜಿ.ಪಾಟೀಲ, ನಿವೃತ್ತ ತಹಶೀಲ್ದಾರ್, ಸಾ.ತಂಗಡಗಿ ತಾ: ಮುದ್ದೇಬಿಹಾಳ ಜಿಲ್ಲಾ: ವಿಜಾಪುರ |
| 2 | ಶ್ರೀ ಎಸ್.ಸಿ.ಮಿಣಜಗಿ, ನಿವೃತ್ತ ತಹಶೀಲ್ದಾರ್, ಹೌಸಿಂಗ್ ಕಾಲನಿ, ಬಾಗಲಕೋಟೆ |
| 3 | ಶ್ರೀ ಎನ್.ವೈ. ಚಿಕ್ಕೊಂಡ, ನಿವೃತ್ತ (ಪ್ರಭಾರ) ತಹಶೀಲ್ದಾರ್ ಬ.ಬಾಗೇವಾಡಿ, ಜಿ: ಬಿಜಾಪುರ |
| 4 | ಶ್ರೀ ರೇವಯ್ಯನವರ, ನಿವೃತ್ತ ತಹಶೀಲ್ದಾರ್, ಸಾ: ಬೆಳವಡಿ ತಾ: ಬೈಲಹೊಂಗಲ, ಜಿ: ಬೆಳಗಾವಿ |
| 5 | ಶ್ರೀ ಎಸ್.ಪಿ.ಘೀವಾರಿ, ನಿವೃತ್ತ ತಹಶೀಲ್ದಾರ್, ಹೌಸಿಂಗ್ ಕಾಲೋನಿ, ನವನಗರ ಹುಬ್ಬಳ್ಳಿ, ಜಿಲ್ಲಾ: ಧಾರವಾಡ |
| 6 | ಶ್ರೀ ಕೆ. ಭೀಮರಾವ್, ಸೇವೆಯಲ್ಲಿ ಇರುತ್ತಾರೆ |

ವಿಚಾರಾಣಾಧಿಕಾರಿಗಳು ಈ ಪ್ರಕರಣದ ವಿಚಾರಣೆಯನ್ನು ಜಿಲ್ಲಾಧಿಕಾರಿಗಳು, ಬಾಗಲಕೋಟೆ ಜಿಲ್ಲೆ ಇವರ ಕಛೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗದಿಪಡಿಸಿದ ಸ್ಥಳದಲ್ಲಿ ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಲಭ್ಯವಿರುವ ಕಛೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶ ಮಾಡುವುದು ಹಾಗೂ ಸಂಬಂಧಿಸಿದ ಕಛೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ/ಬೆರಳಚ್ಚುಗಾರರ ಸಹಾಯವನ್ನು ಹಾಗೂ ಲೇಖನ ಸಾಮಗ್ರಿಗಳನ್ನು ಜಿಲ್ಲಾಧಿಕಾರಿಗಳು, ಬಾಗಲಕೋಟೆ ಜಿಲ್ಲೆ ಇವರು ಒದಗಿಸತಕ್ಕದ್ದು.

ವಿಚಾರಣಾಧಿಕಾರಿಗಳು ಇಲಾಖಾ ವಿಚಾರಣೆಯನ್ನು ಮೇಲ್ಕಂಡ ನಿಯಮಗಳ ನಿಯಮ 11 ಮತ್ತು 11(ಎ) ರಲ್ಲಿನ ವಿಧಿವಿಧಾನವನ್ನು ಅನುಸರಿಸಿ, ಜರುಗಿಸಿ, ವಿಚಾರಣಾ ವರದಿಯನ್ನು ಎರಡು ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಬಿ. ಸಸಾಲಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಸೇವೆಗಳು–3)

ಪಿ.ಆರ್. 2377

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಅನಿವಾಸಿ ಭಾರತೀಯ ಸಮಿತಿ, ಕರ್ನಾಟಕ, ಬೆಂಗಳೂರು ಇದರ ಸಮಿತಿಗೆ ಹೆಚ್ಚುವರಿ ಸದಸ್ಯರನ್ನು ನೇಮಿಸುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 68 ಶಿಸನೇ 2008, ದಿನಾಂಕ: 05/08/2008

2) ಉಪಾಧ್ಯಕ್ಷರು, ಅನಿವಾಸಿ ಭಾರತೀಯ ಸಮಿತಿ, ಕರ್ನಾಟಕ, ಬೆಂಗಳೂರು ಇವರ ಟಿಪ್ಪಣಿ ಸಂಖ್ಯೆ:ಅಭಾಸಕಾ/ಉಕಕ/30/09, ದಿನಾಂಕ: 20/09/2009.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ: 05/08/2008ರ ಆದೇಶದಲ್ಲಿ ಅನಿವಾಸಿ ಭಾರತೀಯ ಸಮಿತಿ, ಕರ್ನಾಟಕ, ಬೆಂಗಳೂರು ಇದಕ್ಕೆ ಸರ್ಕಾರದ ನಾಮನಿರ್ದೇಶಿತ ಅನಿವಾಸಿ ಭಾರತೀಯರ ಪ್ರತಿನಿಧಿಯನ್ನು ನೇಮಕ ಮಾಡಲು ಅವಕಾಶ ಕಲ್ಪಿಸಲಾಗಿದೆ.

ಉಪಾಧ್ಯಕ್ಷರು, ಅನಿವಾಸಿ ಭಾರತೀಯ ಸಮಿತಿ, ಕರ್ನಾಟಕ ಬೆಂಗಳೂರು ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಟಿಪ್ಪಣಿಯನ್ನು ಅನಿವಾಸಿ ಭಾರತೀಯ ಸಮಿತಿ ಇದಕ್ಕೆ ಶ್ರೀ ಅರವಿಂದ ಪಾಟೀಲ್, ಇವರು ದೋಹಾ–ಖತಾರ್ ದೇಶದ ಕರ್ನಾಟಕ ಅನಿವಾಸಿ ಭಾರತೀಯರಾಗಿದ್ದು, ಸದರಿಯವರು ಹಲವಾರು ಸಾಮಾಜಿಕ ಹಾಗೂ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಆಯೋಜಿಸುವಲ್ಲಿ ಯಶಸ್ವಿಯಾಗಿದ್ದು, ಇಂಥಹವರನ್ನು ಅನಿವಾಸಿ ಭಾರತೀಯ ಸಮಿತಿಯ ಕಾರ್ಯ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುವಂತೆ ಪ್ರಸ್ತುತ ಅನಿವಾಸಿ ಭಾರತೀಯ ಸಮಿತಿ, ಕರ್ನಾಟಕ, ಇಲ್ಲಿ ದೋಹ–ಖತಾರ್ ದೇಶದಲ್ಲಿರುವ ಕನ್ನಡಿಗರ ಪರವಾಗಿ ಪ್ರತಿನಿಧಿಸಲು ಇವರನ್ನು 'ವಿಶೇಷ ಪ್ರತಿನಿಧಿ–ಅನಿವಾಸಿ ಭಾರತೀಯ ಸಮಿತಿ, ಕರ್ನಾಟಕ' ಎಂಬುದಾಗಿ ನಿಯೋಜಿಸಲು ಕೋರಿರುತ್ತಾರೆ.

ಮೇಲ್ಕಂಡ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ. ಹಾಗೂ ಷರತ್ತು ಮತ್ತು ನಿಬಂಧನೆಗಳ ಬಗ್ಗೆ ಪ್ರತ್ಯೇಕವಾಗಿ ಹೊರಡಿಸಲಾಗುವುದು.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 74 ಶಿಸನೇ 2009, ಬೆಂಗಳೂರು, ದಿನಾಂಕ: 02.09.2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, **"ಅನಿವಾಸಿ ಭಾರತೀಯ ಸಮಿತಿ, ಕರ್ನಾಟಕ"** ಈ ಸಮಿತಿಗೆ ಶ್ರೀ ಅರವಿಂದ ಪಾಟೀಲ್ ಇವರನ್ನು ದೋಹ–ಖತಾರ್ ದೇಶದಲ್ಲಿರುವ ಕನ್ನಡಿಗರ ಪರವಾಗಿ ಪ್ರತಿನಿಧಿಸಲು ಇವರನ್ನು 'ವಿಶೇಷ ಪ್ರತಿನಿಧಿ–ಅನಿವಾಸಿ ಭಾರತೀಯ ಸಮಿತಿ, ಕರ್ನಾಟಕ' ಎಂಬುದಾಗಿ ಈ ಕೂಡಲೇ ಜಾರಿಗೆ ಬರುವಂತೆ ಸರ್ಕಾರದ ಮುಂದಿನ ಆದೇಶದವರೆಗೆ ನೇಮಿಸಲಾಗಿದೆ.

2. ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ:ಆಇ 633–ವೆಚ್ಚ 12/10 ದಿನಾಂಕ: 11/08/2010ರಲ್ಲಿ ನೀಡಿರುವ ಸಹಮತಿರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ರಹಮತ್ ಉಲ್ಲಾ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿ.ಆ.ಸು.ಇಲಾಖೆ (ರಾಜ್ಯ ಶಿಷ್ಟಾಚಾರ).

ಪಿ.ಆರ್. 2378

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಬೆಳಗಾವಿ ಜಿಲ್ಲೆ ಗೋಕಾಕ ತಾಲ್ಲೂಕಿನ ಕಮ್ಮನಕೋಲು ಗ್ರಾಮದ ಹತ್ತಿರ ಗಿರಿಜನ ಜನಾಂಗಕ್ಕಾಗಿ ಏತ ನೀರಾವರಿ ಯೋಜನೆ ನಿರ್ಮಾಣ ಕಾಮಗಾರಿಯ ಟೆಂಡರನ್ನು ಅನುಮೋದಿಸುವ ಬಗ್ಗೆ.

**ಓದಲಾಗಿದೆ :** 1. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಸಂಖ್ಯೆ: ಮುಇಂ/ಸನೀ(ಉ)ವಲಯ/ಬಿಜೆಪಿ/ಎ.ಇ–1/2010–11/4112 ದಿನಾಂಕ: 19.07.2010

2. ಸರ್ಕಾರದ ಆದೇಶ ಸಂಖ್ಯೆ: ಸನೀಇ/228/ಮಸಾವಿ/2009 ದಿನಾಂಕ: 29.12.2009. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರುರವರ ದಿನಾಂಕ: 28.08.2010ರ ಪತ್ರ ಸಂಖ್ಯೆ: ಮುಸದ/ಆಪ್ತಶಾಖೆ/ ಟೆಂಡರ್/ 09–10/1920.

**ಪ್ರಸ್ತಾವನೆ :**

ಬೆಳಗಾವಿ ಜಿಲ್ಲೆ ಗೋಕಾಕ ತಾಲ್ಲೂಕಿನ ಕಮ್ಮನಕೋಲು ಗ್ರಾಮದ ಹತ್ತಿರ ಗಿರಿಜನ ಉಪಯೋಜನೆಯಡಿ ಏತ ನೀರಾವರಿ ಯೋಜನೆ ನಿರ್ಮಾಣ ಕಾಮಗಾರಿಯ 50.00 ಲಕ್ಷ ರೂ.ಗಳ ಅಂದಾಜು ಪಟ್ಟಿಗೆ ಮೇಲೆ (2)ರಲ್ಲಿ ಓದಲಾದ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರು ನೋಂದಣಿ ಸಂಖ್ಯೆ 282/2009–10ರಡಿ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಕರೆಯಲಾದ ಮೊದಲೆರಡು ಟೆಂಡರ್ ಕರೆಗೆ ಯಾವುದೇ ಪ್ರತಿಕ್ರಿಯೆ ದೊರಕಿರುವುದಿಲ್ಲಾ. ನಂತರ ಮೂರನೇ ಬಾರಿಗೆ ಬೆಳಗಾವಿ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಜಿಲ್ಲಾ ಟೆಂಡರ್ ಬುಲೆಟಿನ್ | 24.05.2010 |
| ಸಂಯುಕ್ತ ಕರ್ನಾಟಕ ದಿನಪತ್ರಿಕೆ | 29.05.2010 |
| ವಿಜಯ ಕರ್ನಾಟಕ ದಿನಪತ್ರಿಕೆ | 01.06.2010 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಒಬ್ಬರು ಗುತ್ತಿಗೆದಾರರು ಮಾತ್ರ ಟೆಂಡರ್‌ನಲ್ಲಿ ಭಾಗವಹಿಸಿರುವುದಾಗಿ ವರದಿಯಾಗಿದ್ದು ದಿನಾಂಕ: 18.06.2010 ರಂದು ಸದರಿ ಗುತ್ತಿಗೆದಾರರ ಟೆಂಡರ್‌ನ್ನು ತೆರೆದು ಪರಿಶೀಲಿಸಲಾಗಿರುತ್ತದೆ. ಇವರ ಟೆಂಡರ್ ಅರ್ಹವಾಗಿದ್ದು ಟೆಂಡರ್‌ನ ವಿವರಗಳು ಕೆಳಕಂಡಂತಿವೆ.

| ಮಂಜೂರಾದ ಅಂದಾಜಿನ ದರಗಳಂತೆ ಹಾಗೂ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | | ರೂ.42,64,349/– |
|---|---|---|---|
| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ<br>ಶ್ರೀ / ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಹಾಗೂ ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| 1 | ಸಂತೋಷ ಕೆ. ಗಾಣಿಗೇರ<br>ಪ್ರಥಮ ದರ್ಜೆ ಗುತ್ತಿಗೆದಾರರು. | 50,68,261/– | 18.85<br>ಹೆಚ್ಚು |

ಮೇಲ್ಕಂಡಂತೆ ಶ್ರೀ ಸಂತೋಷ ಕೆ. ಗಾಣಿಗೇರ, 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 18.85ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 24/07/2010ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 42,64,349/– ಗಳ ಮೇಲೆ ಶೇಕಡ 14ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.48,61,358/–ಗಳಿಗೆ ಕಾಮಗಾರಿಯನ್ನು ಶ್ರೀ ಸಂತೋಷ ಕೆ. ಗಾಣಿಗೇರ, 1ನೇ ದರ್ಜೆ ಗುತ್ತಿಗೆದಾರರಿಗೆ ವಹಿಸುವಂತೆ ಶಿಫಾರಸ್ಸು ಮಾಡಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 3ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 39 ಏನೀಯೋ 2010, ಬೆಂಗಳೂರು, ದಿನಾಂಕ : 08ನೇ ಸೆಪ್ಟೆಂಬರ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೆಳಗಾವಿ ಜಿಲ್ಲೆ ಗೋಕಾಕ ತಾಲ್ಲೂಕಿನ ಕಮ್ಮನಕೋಲು ಗ್ರಾಮದ ಹತ್ತಿರ ಏತ ನೀರಾವರಿ ಯೋಜನೆ ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ 42,64,349/–ಗಳ ಮೇಲೆ ಶೇಕಡ 14ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.48,61,358/–ಗಳಿಗೆ (ನಲವತ್ತೆಂಟು ಲಕ್ಷದ ಅರವತ್ತೊಂದು ಸಾವಿರದ ಮುನ್ನೂರ ಐವತ್ತೆಂಟು ರೂ.ಗಳು ಮಾತ್ರ) ಶ್ರೀ ಸಂತೋಷ ಕೆ. ಗಾಣಿಗೇರ, 1ನೇ ದರ್ಜೆ ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ರುದ್ರಮೂರ್ತಿ**
ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 2379

## ಜಲಸಂಪನ್ಮೂಲ ಸಚಿವಾಲಯ

**ವಿಷಯ** : ಬೆಳಗಾವಿ ಜಿಲ್ಲೆ ರಾಯಭಾಗ ತಾಲ್ಲೂಕಿನ ಅಲಕನೂರ ಗ್ರಾಮದ ಹತ್ತಿರ ಗಂಗಾಕಲ್ಯಾಣ ನೀರಾವರಿ ಯೋಜನೆ ನಿರ್ಮಾಣ ಕಾಮಗಾರಿಯ ಟೆಂಡರನ್ನು ಅನುಮೋದಿಸುವ ಬಗ್ಗೆ.

**ಓದಲಾಗಿದೆ** :
1. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಸಂಖ್ಯೆ: ಮುಇಂ/ಸನೀ(ಉ)ವಲಯ/ಬಿಜೆಪಿ/ಎ.ಇ–1/2010–11/3522 ದಿನಾಂಕ: 19.06.2010.
2. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರ ರವರ ಆದೇಶ ಸಂಖ್ಯೆ: ಮುಇಂ/ಸನೀ(ಉ)ವ/ಬಿಜೆಪಿ/ಎಇ–1/09–10/7187 ದಿನಾಂಕ: 03.12.2009.
3. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ರವರ ದಿನಾಂಕ 28.08.2010ರ ಪತ್ರ ಸಂಖ್ಯೆ: ಮುಸದ/ಆಪ್ತಶಾಖೆ/ ಟೆಂಡರ್/ 09–10/1920.

**ಪ್ರಸ್ತಾವನೆ :**

ಬೆಳಗಾವಿ ಜಿಲ್ಲೆ ರಾಯಭಾಗ ತಾಲ್ಲೂಕಿನ ಅಲಕನೂರ ಗ್ರಾಮದ ಹತ್ತಿರ ಗಂಗಾಕಲ್ಯಾಣ ನೀರಾವರಿ ಯೋಜನೆ ನಿರ್ಮಾಣ ಕಾಮಗಾರಿಯ ರೂ. 20.00 ಲಕ್ಷ ರೂ.ಗಳ ಅಂದಾಜು ಪಟ್ಟಿಗೆ ಮೇಲೆ (2)ರಲ್ಲಿ ಓದಲಾದ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು ಅಧೀಕ್ಷಕ ಇಂಜಿನಿಯರ್, ಸಣ್ಣ ನೀರಾವರಿ ವೃತ್ತ, ಬೆಳಗಾವಿರವರು ನೋಂದಣಿ ಸಂಖ್ಯೆ 68/12–2009ರಡಿ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬೆಳಗಾವಿ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಜಿಲ್ಲಾ ಟೆಂಡರ್ ಬುಲೆಟಿನ್ | 12.04.2010 |
| ನಾಡೋಜಿ ದಿನಪತ್ರಿಕೆ | 15.04.2010 ಹಾಗೂ 20.04.2010 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಒಬ್ಬರು ಗುತ್ತಿಗೆದಾರರು ಮಾತ್ರ ಟೆಂಡರ್‌ನಲ್ಲಿ ಭಾಗವಹಿಸಿರುವುದಾಗಿ ವರದಿಯಾಗಿದ್ದು ದಿನಾಂಕ: 05.05.2010 ರಂದು ಸದರಿ ಗುತ್ತಿಗೆದಾರರ ಟೆಂಡರ್‌ನ್ನು ತೆರೆದು ಪರಿಶೀಲಿಸಲಾಗಿರುತ್ತದೆ. ಇವರ ಟೆಂಡರ್ ಅರ್ಹವಾಗಿದ್ದು ಟೆಂಡರ್‌ನ ವಿವರಗಳು ಕೆಳಕಂಡಂತಿವೆ.

| **ಮಂಜೂರಾದ ಅಂದಾಜಿನ ದರಗಳಂತೆ ಹಾಗೂ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ** | | | **ರೂ. 19,09,504/–** |
|---|---|---|---|
| **ಕ್ರಮ ಸಂಖ್ಯೆ** | **ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ / ಮೆಸರ್ಸ್** | **ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ** | **ಮಂಜೂರಾದ ಅಂದಾಜಿನ ದರಗಳ ಹಾಗೂ ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ** |
| 1 | ಸಿದ್ದಪ್ಪಾ ಬಿ ನೇರಲಿ ದ್ವಿತೀಯ ದರ್ಜೆ ಗುತ್ತಿಗೆದಾರರು. | 22,34, 120/– | 17 ಹೆಚ್ಚು |

ಮೇಲ್ಕಂಡಂತೆ ಶ್ರೀ ಸಿದ್ದಪ್ಪಾ ಬಿ ನೇರಲಿ, 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 17ರಷ್ಟು ಹೆಚ್ಚಾಗಿದ್ದು, ಈ ಮೊತ್ತಕ್ಕೆ ಸದರಿಯವರ ಟೆಂಡರ್‌ನ್ನು ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ: 24/07/2010 ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 19,09,504/–ಗಳ ಮೇಲೆ ಶೇಕಡ 10ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.21,00,454/–ಗಳಿಗೆ ಕಾಮಗಾರಿಯನ್ನು ಶ್ರೀ ಸಿದ್ದಪ್ಪಾ ಬಿ ನೇರಲಿ, 2ನೇ ದರ್ಜೆ ಗುತ್ತಿಗೆದಾರರಿಗೆ ವಹಿಸುವಂತೆ ಶಿಫಾರಸ್ಸು ಮಾಡಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 3ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 36 ಏನೀಯೋ 2010, ಬೆಂಗಳೂರು, ದಿನಾಂಕ : 08ನೇ ಸೆಪ್ಟೆಂಬರ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೆಳಗಾವಿ ಜಿಲ್ಲೆ ರಾಯಭಾಗ ತಾಲ್ಲೂಕಿನ ಅಲಕನೂರ ಗ್ರಾಮದ ಹತ್ತಿರ ಗಂಗಾಕಲ್ಯಾಣ ನೀರಾವರಿ ಯೋಜನೆ ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ 19,09,504/–ಗಳ ಮೇಲೆ ಶೇಕಡ 10ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.21,00,454/–ಗಳಿಗೆ(ಇಪ್ಪತ್ತೊಂದು ಲಕ್ಷದ ನಾಲ್ಕು ನೂರ ಐವತ್ನಾಲ್ಕು ರೂ.ಗಳು ಮಾತ್ರ) ಶ್ರೀ ಸಿದ್ದಪ್ಪಾ ಬಿ ನೇರಲಿ, 2ನೇ ದರ್ಜೆ ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ರುದ್ರಮೂರ್ತಿ**
ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 2380

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಕೊಪ್ಪಳ ಜಿಲ್ಲೆ ಯಲಬುರ್ಗಾ ತಾಲ್ಲೂಕಿನ ವಣಗೇರಾ ಜಿನುಗು ಕೆರೆ ನಿರ್ಮಾಣ ಕಾಮಗಾರಿಯ ಟೆಂಡರನ್ನು ಅನುಮೋದಿಸುವ ಬಗ್ಗೆ.

**ಓದಲಾಗಿದೆ :** 1. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಸಂಖ್ಯೆ: ಮುಇಂ/ಸನೀ(ಉ)ವ/ತಾಸ-3/ಸ.ಇಂ-7/ವಣಗೇರಾ/2010-11/3263 ದಿನಾಂಕ: 02.06.2010

2. ಸರ್ಕಾರದ ಆದೇಶ ಸಂಖ್ಯೆ: ಸನೀಇ/06/ನಯೋಕಾ/2009 ದಿನಾಂಕ: 06.01.2010.

3. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ರವರ ದಿನಾಂಕ: 28.08.2010ರ ಪತ್ರ ಸಂಖ್ಯೆ: ಮುಸದ/ಆಪ್ತಶಾಖೆ/ ಟೆಂಡರ್/ 09-10/1920.

**ಪ್ರಸ್ತಾವನೆ :**

ಕೊಪ್ಪಳ ಜಿಲ್ಲೆ ಯಲಬುರ್ಗಾ ತಾಲ್ಲೂಕಿನ ವಣಗೇರಾ ಜಿನುಗು ಕೆರೆ ನಿರ್ಮಾಣ ಕಾಮಗಾರಿಯ ರೂ. 45.00 ಲಕ್ಷ ರೂ.ಗಳ ಅಂದಾಜು ಪಟ್ಟಿಗೆ ಮೇಲೆ (2)ರಲ್ಲಿ ಓದಲಾದ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು ಅಧೀಕ್ಷಕ ಇಂಜಿನಿಯರ್, ಸಣ್ಣ ನೀರಾವರಿ ವೃತ್ತ, ಗುಲ್ಬರ್ಗಾರವರು ನೋಂದಣಿ ಸಂಖ್ಯೆ 205/2009-10ರಡಿ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಕುಷ್ಟಗಿ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ-ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಜಿಲ್ಲಾ ಟೆಂಡರ್ ಬುಲೆಟಿನ್ | 12.03.2010 |
| ಕನ್ನಡ ಪ್ರಭ ದಿನಪತ್ರಿಕೆ | 10.03.2010 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಒಬ್ಬರು ಗುತ್ತಿಗೆದಾರರು ಮಾತ್ರ ಟೆಂಡರ್‌ನಲ್ಲಿ ಭಾಗವಹಿಸಿರುವುದಾಗಿ ವರದಿಯಾಗಿದ್ದು ದಿನಾಂಕ: 20.03.2010 ರಂದು ಸದರಿ ಗುತ್ತಿಗೆದಾರರ ಟೆಂಡರ್‌ನ್ನು ತೆರೆದು ಪರಿಶೀಲಿಸಲಾಗಿರುತ್ತದೆ. ಇವರ ಟೆಂಡರ್ ಅರ್ಹವಾಗಿದ್ದು ಟೆಂಡರ್‌ನ ವಿವರಗಳು ಕೆಳಕಂಡಂತಿವೆ.

| **ಮಂಜೂರಾದ ಅಂದಾಜಿನ ದರಗಳಂತೆ ಹಾಗೂ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ** | | | **ರೂ. 40,13,701/-** |
|---|---|---|---|
| **ಕ್ರಮ ಸಂಖ್ಯೆ** | **ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ / ಮೆಸರ್ಸ್** | **ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ** | **ಮಂಜೂರಾದ ಅಂದಾಜಿನ ದರಗಳ ಹಾಗೂ ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ** |
| 1 | ಅಶೋಕ ಬಳ್ಳೊಳ್ಳಿ ಪ್ರಥಮ ದರ್ಜೆ ಗುತ್ತಿಗೆದಾರರು. | 44,36,176/- | 10.53 ಹೆಚ್ಚು |

ಮೇಲ್ಕಂಡಂತೆ ಶ್ರೀ ಅಶೋಕ ಬಳ್ಳೊಳ್ಳಿ, 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 10.53ರಷ್ಟು ಹೆಚ್ಚಾಗಿದ್ದು, ಈ ಮೊತ್ತಕ್ಕೆ ಸದರಿಯವರ ಟೆಂಡರ್‌ನ್ನು ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 24/07/2010ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 40,13,701/-ಗಳ ಮೇಲೆ ಶೇಕಡ 9.50ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.43,95,003/-ಗಳಿಗೆ ಕಾಮಗಾರಿಯನ್ನು ಶ್ರೀ ಅಶೋಕ ಬಳ್ಳೊಳ್ಳಿ, 1ನೇ ದರ್ಜೆ ಗುತ್ತಿಗೆದಾರರಿಗೆ ವಹಿಸುವಂತೆ ಶಿಫಾರಸ್ಸು ಮಾಡಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 3ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 07 ಹೊಕೆನಿ 2010, ಬೆಂಗಳೂರು, ದಿನಾಂಕ : 08ನೇ ಸೆಪ್ಟೆಂಬರ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕೊಪ್ಪಳ ಜಿಲ್ಲೆ ಯಲಬುರ್ಗಾ ತಾಲ್ಲೂಕಿನ ವಣಗೇರಾ ಜಿನುಗು ಕೆರೆ ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ 40,13,701/-ಗಳ ಮೇಲೆ ಶೇಕಡ 9.50ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.43,95,003/-ಗಳಿಗೆ (ನಲವತ್ತೂರು ಲಕ್ಷದ ತೊಂಭತ್ತೈದು ಸಾವಿರದ ಮೂರು ರೂ.ಗಳು ಮಾತ್ರ) ಶ್ರೀ ಅಶೋಕ ಬಳ್ಳೊಳ್ಳಿ, 1ನೇ ದರ್ಜೆ ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ರುದ್ರಮೂರ್ತಿ**
ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 2381

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಉತ್ತರ ಕನ್ನಡ ಜಿಲ್ಲೆ ಸಿದ್ದಾಪುರ ತಾಲ್ಲೂಕಿನ ಹೇಮನಬೈಲು ಹತ್ತಿರ ಏತ ನೀರಾವರಿ ಯೋಜನೆ ಕಾಮಗಾರಿಯ ಟೆಂಡರನ್ನು ಅನುಮೋದಿಸುವ ಬಗ್ಗೆ.

**ಓದಲಾಗಿದೆ :** 1. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಸಂಖ್ಯೆ: ಮುಇಂ/ ಸನೀ(ಉ)ವಲಯ/ ಬಿಜೆಪಿ/ ಎ.ಇ–2/ 2010–11/4184 ದಿನಾಂಕ: 22.07.2010.

2. ಸರ್ಕಾರದ ಆದೇಶ ಸಂಖ್ಯೆ: ಸನೀಇ 15 ಮಸಾವಿ 2009(6) ದಿನಾಂಕ: 26.02.2009.

3. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ರವರ ದಿನಾಂಕ 28.08.2010ರ ಪತ್ರ ಸಂಖ್ಯೆ: ಮುಸದ/ ಆಪ್ತಶಾಖೆ/ ಟೆಂಡರ್/ 09–10/1920.

**ಪ್ರಸ್ತಾವನೆ :**

ಉತ್ತರ ಕನ್ನಡ ಜಿಲ್ಲೆ ಸಿದ್ದಾಪುರ ತಾಲ್ಲೂಕಿನ ಹೇಮನಬೈಲು ಹತ್ತಿರ ಏತ ನೀರಾವರಿ ಯೋಜನೆ ನಿರ್ಮಾಣ ಕಾಮಗಾರಿಯ ರೂ. 50.00 ಲಕ್ಷ ರೂ.ಗಳ ಅಂದಾಜು ಪಟ್ಟಿಗೆ ಮೇಲೆ (2)ರಲ್ಲಿ ಓದಲಾದ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರು ನೋಂದಣಿ ಸಂಖ್ಯೆ 413/ 2008–09ರಡಿ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಹಳಿಯಾಳ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಜಿಲ್ಲಾ ಟೆಂಡರ್ ಬುಲೆಟಿನ್ | 27.03.2010 |
| ಲೋಕಧ್ವನಿ ದಿನಪತ್ರಿಕೆ | 04.04.2010 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಇಬ್ಬರು ಗುತ್ತಿಗೆದಾರರು ಟೆಂಡರ್‌ನಲ್ಲಿ ಭಾಗವಹಿಸಿರುವುದಾಗಿ ವರದಿಯಾಗಿದೆ. ಸದರಿ ಗುತ್ತಿಗೆದಾರರ ಟೆಂಡರ್‌ನ್ನು ದಿನಾಂಕ: 15.04.2010 ರಂದು ತೆರೆದು ಪರಿಶೀಲಿಸಲಾಗಿದ್ದು ಈ ಪೈಕಿ ಒಬ್ಬರು ಗುತ್ತಿಗೆದಾರರು ಮಾತ್ರ ಅರ್ಹರಾಗಿದ್ದು ಸದರಿಯವರ ಟೆಂಡರ್‌ನ ವಿವರಗಳು ಕೆಳಕಂಡಂತಿವೆ.

| **ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ** | | | **ರೂ. 42,42,964/–** | |
|---|---|---|---|---|
| **ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದ ಟೆಂಡರಿಗೆ ಇಡಲಾದ ಮೊತ್ತ** | | | **ರೂ. 41,08,012/–** | |
| **ಕ್ರಮ ಸಂಖ್ಯೆ** | **ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ / ಮೆಸರ್ಸ್** | **ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ** | **ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ** | **ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ** |
| 1 | ಸುಧೀರ ಜಿ ಪಂಡಿತ ಪ್ರಥಮ ದರ್ಜೆ ಗುತ್ತಿಗೆದಾರರು. | 50,32,011/– | 18.59 ಹೆಚ್ಚು | 22.49 ಹೆಚ್ಚು |

ಮೇಲ್ಕಂಡಂತೆ ಶ್ರೀ ಸುಧೀರ ಜಿ ಪಂಡಿತ, 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 22.49ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ: 24/07/2010 ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 41,08,012/–ಗಳ ಮೇಲೆ ಶೇಕಡ 14ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.46,83,134/–ಗಳಿಗೆ ಕಾಮಗಾರಿಯನ್ನು ಶ್ರೀ ಸುಧೀರ ಜಿ ಪಂಡಿತ, 1ನೇ ದರ್ಜೆ ಗುತ್ತಿಗೆದಾರರಿಗೆ ವಹಿಸುವಂತೆ ಶಿಫಾರಸ್ಸು ಮಾಡಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 3ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 40 ಏನೀಯೋ 2010, ಬೆಂಗಳೂರು, ದಿನಾಂಕ: 08ನೇ ಸೆಪ್ಟೆಂಬರ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಉತ್ತರ ಕನ್ನಡ ಜಿಲ್ಲೆ ಸಿದ್ದಾಪುರ ತಾಲ್ಲೂಕಿನ ಹೇಮನಬೈಲು ಹತ್ತಿರ ಏತ ನೀರಾವರಿ ಯೋಜನೆ ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 41,08,012/- ಗಳ ಮೇಲೆ ಶೇಕಡ 14ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.46,83,134/-ಗಳಿಗೆ (ನಲವತ್ತಾರು ಲಕ್ಷ ಎಂಭತ್ತಮೂರು ಸಾವಿರದ ನೂರ ಮೂವತ್ತ ನಾಲ್ಕು ಮಾತ್ರ) ಶ್ರೀ ಸುಧೀರ ಜಿ ಪಂಡಿತ, 1ನೇ ದರ್ಜೆ ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ರುದ್ರಮೂರ್ತಿ**
ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 2382

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಚನ್ನಗಿರಿ ಪಟ್ಟಣ ಮಲ್ಲಾಡಿಹಳ್ಳಿ ಹಾಗೂ ಮಾರ್ಗ ಮಧ್ಯದ 70 ಹಳ್ಳಿಗಳಿಗೆ ಶಾಂತಿಸಾಗರ ಜಲಾಶಯದಿಂದ ಕುಡಿಯುವ ನೀರು ಸರಬರಾಜು ಯೋಜನೆಯ ಮಾರ್ಪಡಿಸಿದ ಅಂದಾಜು ರೂ.5796.00 ಲಕ್ಷಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :** (1) ಸರ್ಕಾರಿ ಆದೇಶ ಸಂಖ್ಯೆ:ನಅಇ:5:ಯುಡಬ್ಲ್ಯೂ ಎಸ್:2009 ದಿನಾಂಕ: 20-2-2009.
(2) ವ್ಯವಸ್ಥಾಪಕ ನಿರ್ದೇಶಕರು, ಕನನೀಸ ಮತ್ತು ಒಚ ಮಂಡಳಿ ರವರ ಪತ್ರ ಸಂಖ್ಯೆ:ಕಜಮಂ: ಮುಅ:ಉಮುಅ-(ಸ): ತಾಂಸ-9: ಚನ್ನಗಿರಿ:2220:2009-10 ದಿನಾಂಕ: 10-11-2009.

**ಪ್ರಸ್ತಾವನೆ :**

ಚನ್ನಗಿರಿ ಪಟ್ಟಣವು ದಾವಣಗೆರೆ ಜಿಲ್ಲೆಯ ತಾಲ್ಲೂಕು ಕೇಂದ್ರವಾಗಿದ್ದು, ಸುಮಾರು 60 ಕಿ.ಮೀ.ದೂರದಲ್ಲಿದೆ. 2001ರ ಜನಗಣತಿ ಪ್ರಕಾರ ಈ ಪಟ್ಟಣದ ಜನಸಂಖ್ಯೆಯು ಸುಮಾರು 18,714 ಇದ್ದು ಹಾಲಿ 22,500 ಇರುತ್ತದೆ. ಪ್ರಸ್ತುತ ಈ ಪಟ್ಟಣಕ್ಕೆ 1996ರಲ್ಲಿ ಅನುಷ್ಠಾನಗೊಳಿಸಿದ ಹಿರೇಮಲ್ಲಹಳ್ಳಿ ಬಳಿ ಭದ್ರಾ ಬಲದಂಡೆ ಕಾಲುವೆಯಿಂದ ತಲಾ ದಿನಂಪ್ರತಿ 40 ಲೀಟರ್‌ನಂತೆ ನೀರು ಸರಬರಾಜು ಮಾಡಲಾಗುತ್ತಿದೆ. ಈ ಯೋಜನೆಯನ್ನು 2011ರ ಅಂತ್ಯಕ್ಕೆ ನಿರೀಕ್ಷಿಸಿದ 21000 ಜನಸಂಖ್ಯೆಗೆ ರೂಪಿಸಲಾಗಿತ್ತು.

ಪ್ರಸ್ತುತ ಹಾಲಿ ನೀರು ಸರಬರಾಜು ಯೋಜನೆಯಿಂದ ಶೇ.75 ರಷ್ಟು ಜನಸಂಖ್ಯೆಗೆ ಮಾತ್ರ ನೀರು ಪೂರೈಕೆಯಾಗುತ್ತಿದ್ದು, ವಡ್ನಾಳ್ ರಾಜಣ್ಣ ಹಾಗೂ ಆಶ್ರಯ ಬಡಾವಣೆಗಳಿಗೆ ಕೊಳವೆ ಬಾವಿಗಳಿಂದ ನೀರು ಪೂರೈಕೆಯಾಗುತ್ತಿದ್ದು, ಈ ಯೋಜನೆಯಲ್ಲಿ ಅಳವಡಿಸಿದ ಪಂಪ್‌ಗಳು ಮತ್ತು ಎ.ಸಿ.ಕೊಳವೆ ಮಾರ್ಗಗಳು ಹಳೆಯದಾಗಿದ್ದು ನೀರು ಪೂರೈಕೆಯಲ್ಲಿ ಸೋರಿಕೆ ಕಂಡು ಬರುತ್ತಿದ್ದು ಕೊಳವೆ ಮಾರ್ಗಗಳು ಪದೇ ಪದೇ ಒಡೆಯುತ್ತಿವೆ. ಆದ್ದರಿಂದ ಚನ್ನಗಿರಿ ಪಟ್ಟಣ, ಮಲ್ಲಾಡಿಹಳ್ಳಿ ಸೇರಿ ಮಾರ್ಗ ಮಧ್ಯದ 12 ಹಳ್ಳಿಗಳಿಗೆ ಚನ್ನಗಿರಿಯಿಂದ ಸುಮಾರು 14 ಕಿ.ಮೀ. ದೂರವಿರುವ ಶಾಂತಿಸಾಗರ ಜಲಾಶಯದಿಂದ ನೀರು ಸರಬರಾಜು ಮಾಡುವ ಯೋಜನೆಯನ್ನು ರೂಪಿಸಲಾಗಿದೆ. ಈ ಯೋಜನೆಯ ಮಧ್ಯಂತರ ಅವಧಿ 2026 ರಲ್ಲಿ ನಿರೀಕ್ಷಿಸಬಹುದಾದ ಸುಮಾರು 65,000 ಹಾಗೂ ಯೋಜನೆಯ ಅಂತಿಮ ಅವಧಿ 2041ರಲ್ಲಿ ನಿರೀಕ್ಷಿಸಬಹುದಾದ ಸುಮಾರು 85,800 ಜನಸಂಖ್ಯೆಗೆ ತಲಾ ದಿನಂಪ್ರತಿ 135 ಲೀಟರ್‌ನಂತೆ ಚನ್ನಗಿರಿ ಪಟ್ಟಣ ಹಾಗೂ 45 ಲೀಟರ್‌ನಂತೆ ಮಾರ್ಗ ಮಧ್ಯದ 12 ಹಳ್ಳಿಗಳಿಗೆ ಶಾಂತಿಸಾಗರ ಜಲಾಶಯದಿಂದ 2008-09ನೇ ಸಾಲಿನ ದರಪಟ್ಟಿಯನ್ವಯ ರೂ.3745.00 ಲಕ್ಷಗಳ ಅಂದಾಜಿನಲ್ಲಿ ನೀರು ಸರಬರಾಜು ವ್ಯವಸ್ಥೆಗೆ ಕೊಳವೆ ನೀರು ಸರಬರಾಜು ಯೋಜನೆಯಡಿ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲು ಸರ್ಕಾರವು ಮೇಲೆ ಓದಲಾದ ಕ್ರಮಾಂಕ (1)ರ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ. ಈ ಯೋಜನೆಯನ್ನು ಅನುಷ್ಠಾನಗೊಳಿಸಿರುವುದಿಲ್ಲ.

ತದನಂತರ ಮಾನ್ಯ ಶಾಸಕರು ಚನ್ನಗಿರಿ ಹಾಗೂ ಹೊಳಲ್ಕೆರೆ ಇವರ ಕೋರಿಕೆಯಂತೆ ಮೇಲಿನ ನೀರು ಸರಬರಾಜು ಯೋಜನೆಯಡಿಯಲ್ಲಿ 12 ಹಳ್ಳಿಗಳ ಜೊತೆಗೆ 58 ಹಳ್ಳಿಗಳಿಗೆ ನೀರು ಸರಬರಾಜು ಮಾಡಲು ಅವಕಾಶ ಕಲ್ಪಿಸಿ ಯೋಜನೆ ತಯಾರಿಸಲು ಕೋರಿರುತ್ತಾರೆ. ಅದರಂತೆ ಚನ್ನಗಿರಿ ಹಾಗೂ ಮಾರ್ಗ ಮಧ್ಯದ 70 ಹಳ್ಳಿಗಳಿಗೆ ಸಮಗ್ರ ಕುಡಿಯುವ ನೀರು ಸರಬರಾಜು ಯೋಜನೆಯನ್ನು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು ಮೇಲೆ ಓದಲಾದ ಕ್ರಮಾಂಕ (2)ರ ಪತ್ರದಲ್ಲಿ ಯೋಜನೆಯನ್ನು ಅಂದಾಜು ರೂ.5796.00 ಲಕ್ಷಗಳಿಗೆ ತಯಾರಿಸಿ ಸರ್ಕಾರದ ಪರಿಷ್ಕೃತ ಆಡಳಿತಾತ್ಮಕ ಅನುಮೋದನೆ ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತದೆ.

ಈ ಯೋಜನೆಯನ್ನು ಮಂಡಳಿಯ ಮತ್ತು ಲೋಕೋಪಯೋಗಿ ಇಲಾಖೆಯ 2009-10ನೇ ಸಾಲಿನ ದರಪಟ್ಟಿಯನ್ವಯ ರೂ.5796.00 ಲಕ್ಷಗಳಿಗೆ ಪರಿಷ್ಕೃತ ಅಂದಾಜು ತಯಾರಿಸಿ **ಕೊಳವೆ ನೀರು ಮಾರ್ಗ ಯೋಜನೆಯಡಿ** ಈ ಕೆಳಕಂಡ ಆರ್ಥಿಕ ಮಾದರಿಯಲ್ಲಿ ಕೈಗೆತ್ತಿಕೊಳ್ಳಲು ಉದ್ದೇಶಿಸಲಾಗಿದೆ.

| | |
|---|---|
| ಸರ್ಕಾರದ ಅನುದಾನ ಶೇ. 100 | ರೂ.2547.00 ಲಕ್ಷಗಳು |
| ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ (ಮಲ್ಲಾಡಿಹಳ್ಳಿ ಸೇರಿ) | ರೂ.3249.00 ಲಕ್ಷಗಳು |
| **ಒಟ್ಟು** | **ರೂ.5796.00 ಲಕ್ಷಗಳು** |

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ನಅಇ 28 ಯುಡಬ್ಲ್ಯೂ ಎಸ್ 2010, ಬೆಂಗಳೂರು, ದಿನಾಂಕ : 04-09-2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಚನ್ನಗಿರಿ ಪಟ್ಟಣ ಮಲ್ಲಾಡಿಹಳ್ಳಿ ಹಾಗೂ ಮಾರ್ಗ ಮಧ್ಯದ 70 ಹಳ್ಳಿಗಳಿಗೆ ಶಾಂತಿಸಾಗರ ಜಲಾಶಯದಿಂದ ಕುಡಿಯುವ ನೀರು ಸರಬರಾಜು ಯೋಜನೆಯನ್ನು ಮೂಲ ಅಂದಾಜು ರೂ.3745.00 ಲಕ್ಷಗಳಿಂದ ಪರಿಷ್ಕರಿಸಿ, ರೂ.5796.00 ಲಕ್ಷಗಳಿಗೆ (ರೂ. ಐದು ಸಾವಿರದ ಏಳುನೂರ ತೊಂಭತ್ತಾರು ಲಕ್ಷಗಳಿಗೆ ಮಾತ್ರ) ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು ಈ ಕೆಳಕಂಡ ಷರತ್ತುಗಳನ್ವಯ ಕೈಗೆತ್ತಿಕೊಳ್ಳಲು ಸರ್ಕಾರವು ಆಡಳಿತಾತ್ಮಕ ಅನುಮೋದನೆಯನ್ನು ನೀಡಿದೆ.

(i) Water Rates as proposed by KUWS&DB., have to be implemented to meet the O&M cost.

(ii) KTPP provisions, quality control and timely completion should be ensured.

(iii) ಯೋಜನೆಯ ಪರಿಷ್ಕೃತ ಅಂದಾಜಿನ ವೆತ್ಯಾಸದ ಮೊತ್ತವಾದ ರೂ. 2051.00 ಲಕ್ಷಗಳ ಮೊತ್ತವನ್ನು ಆರ್ಥಿಕ ಇಲಾಖೆಯಿಂದ ಹೆಚ್ಚುವರಿಯಾಗಿ ಅನುದಾನದ ಮೂಲಕ ಪಡೆಯತಕ್ಕದ್ದು, ಅಥವಾ ಒಂದು ವೇಳೆ ಎಸ್.ಎಫ್.ಸಿ. ಅನುದಾನದಲ್ಲಿ ಮೊತ್ತ ಲಭ್ಯವಿದ್ದಲ್ಲಿ ಪಡೆಯಬಹುದಾಗಿದೆ. ಈ ಕುರಿತು ಮಂಡಳಿಯು ಸೂಕ್ತ ವ್ಯವಹಾರವನ್ನು ಸಂಬಂಧಪಟ್ಟ ಇಲಾಖೆಗಳೊಂದಿಗೆ ನಡೆಸಿ ಸದರಿ ಮೊತ್ತವನ್ನು ಪಡೆಯತಕ್ಕದ್ದು.

(iv) ಈ ಯೋಜನೆಗೆ ಈಗಾಗಲೇ ಆದೇಶ ಸಂಖ್ಯೆ:ನಅಇ 5 ಯುಡಬ್ಲ್ಯೂಎಸ್ 2009 ದಿನಾಂಕ: 20-2-2009ರಲ್ಲಿ ವಿಧಿಸಿದ ಷರತ್ತು ಮತ್ತು ನಿಬಂಧನೆಗಳು ಅನ್ವಯಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯು ಕಛೇರಿ ಟಿಪ್ಪಣಿ ಸಂಖ್ಯೆ:ಎಫ್ ಡಿ:559 ಇಕ್ಸ್‌ಪಿ-9:2010, (ಆರ್‌ಎಫ್-44322) ದಿನಾಂಕ: 28.08.2010 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಂ.ಹಿರೇಮಠ**

ಸರ್ಕಾರದ ಅಧೀನ ಕಾರ್ಯದರ್ಶಿ

ನಗರಾಭಿವೃದ್ಧಿ ಇಲಾಖೆ

ಪಿ.ಆರ್. 2383

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ** : ಕರ್ನಾಟಕ ಹಿಂದಿ ಪ್ರಚಾರ ಸಭಾ, ಗುಲ್ಬರ್ಗಾ ಸಂಸ್ಥೆಯ ಕಟ್ಟಡ ನಿರ್ಮಾಣ ಹಾಗೂ ಅಭಿವೃದ್ಧಿ ಕಾರ್ಯಗಳಿಗೆ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ** : ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರ ಪತ್ರ ಸಂಖ್ಯೆ ಕಸನಿ/11/ಹೊ.ಯೋ/ 2009-10, ದಿನಾಂಕ: 21.05.2010

**ಪ್ರಸ್ತಾವನೆ :**

ಮಾನ್ಯ ಮುಖ್ಯಮಂತ್ರಿಯವರು ದಿನಾಂಕ: 27.08.2009 ರಂದು ಗುಲಬರ್ಗಾ ಜಿಲ್ಲೆಯ ಪ್ರವಾಸದ ಸಂದರ್ಭದಲ್ಲಿ ಕರ್ನಾಟಕ ಹಿಂದಿ ಪ್ರಚಾರ ಸಭಾ, ಗುಲ್ಬರ್ಗಾ ಸಂಸ್ಥೆಯ ಕಟ್ಟಡ ನಿರ್ಮಾಣ ಹಾಗೂ ಅಭಿವೃದ್ಧಿ ಕಾರ್ಯಗಳಿಗಾಗಿ ರೂ.50.00 ಲಕ್ಷಗಳ ಅನುದಾನವನ್ನು ಬಿಡುಗಡೆ ಮಾಡುವುದಾಗಿ ಭರವಸೆ ನೀಡಿರುತ್ತಾರೆ. ಈ ಹಿನ್ನೆಲೆಯಲ್ಲಿ ಸದರಿ ಸಂಸ್ಥೆಯ ಕಟ್ಟಡ ನಿರ್ಮಾಣ ಹಾಗೂ ಅಭಿವೃದ್ಧಿ ಕಾರ್ಯಗಳಿಗೆ ರೂ.50.00 ಲಕ್ಷಗಳನ್ನು 2010-11ನೇ ಸಾಲಿನಲ್ಲಿ ಲೆಕ್ಕಶೀರ್ಷಿಕೆ 2205-00-102-0-77-101 (ಯೋಜನೆ) ಅಡಿ ಒದಗಿಸಿರುವ ಅನುದಾನದಿಂದ ಭರಿಸಿ ಬಿಡುಗಡೆ ಮಾಡಲು ಸರ್ಕಾರಿ ಆದೇಶ ಹೊರಡಿಸುವಂತೆ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಇವರು ಮೇಲೆ ಓದಲಾದ ಪತ್ರದಲ್ಲಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಸಂವಾಪ್ರ 158 ಕಸನಿ 2009, ಬೆಂಗಳೂರು, ದಿನಾಂಕ : 03.09.2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ಹಿಂದಿ ಪ್ರಚಾರ ಸಭಾ, ಗುಲ್ಬರ್ಗಾ ಸಂಸ್ಥೆಯ ಕಟ್ಟಡ ನಿರ್ಮಾಣ ಹಾಗೂ ಅಭಿವೃದ್ಧಿ ಕಾರ್ಯಗಳಿಗೆ ರೂ.50.00 ಲಕ್ಷ (ರೂ. ಐವತ್ತು ಲಕ್ಷಗಳು ಮಾತ್ರ) ಗಳನ್ನು ಅಧ್ಯಕ್ಷರು, ಕರ್ನಾಟಕ ಹಿಂದಿ ಪ್ರಚಾರ ಸಭಾ, ಗುಲ್ಬರ್ಗಾ ಇವರಿಗೆ ಜಿಲ್ಲಾಧಿಕಾರಿಗಳ ಮೂಲಕ ಬಿಡುಗಡೆ ಮಾಡಲು ನಿರ್ದೇಶಕರು ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರಿಗೆ ಈ ಕೆಳಕಂಡ ಷರತ್ತಿಗೊಳಪಟ್ಟು ಸರ್ಕಾರದ ಮಂಜೂರಾತಿ ನೀಡಿದೆ.

**ಷರತ್ತುಗಳು :**

1) ಕಾಮಗಾರಿಯ ಅಂದಾಜು ಪಟ್ಟಿಗೆ ಸಕ್ಷಮ ಪ್ರಾಧಿಕಾರದಿಂದ ಆಡಳಿತಾತ್ಮಕ/ ತಾಂತ್ರಿಕ ಅನುಮೋದನೆಯನ್ನು ಪಡೆದು ಕಾಮಗಾರಿ ಕೈಗೊಳ್ಳುವುದು.
2) ಕಾಮಗಾರಿಯನ್ನು ಟೆಂಡರ್ ಕರೆದು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಕಾಯ್ದೆ 1999 ಹಾಗೂ ಅದರ ನಿಯಮಗಳು 2000 ರಂತೆ ಕಾಮಗಾರಿ ಕೈಗೊಂಡ ನಂತರ ಪ್ರಗತಿ ಆಧರಿಸಿ, ಹಂತ ಹಂತವಾಗಿ ಅನುದಾನ ಬಿಡುಗಡೆ ಮಾಡುವುದು.
3) ಕಾಮಗಾರಿಯನ್ನು ಪೂರ್ಣಗೊಳಿಸಲು ಸಮಯ ನಿಗದಿಪಡಿಸಿಕೊಂಡು ಆ ಸಮಯದೊಳಗೆ ಪೂರ್ಣಗೊಳಿಸುವುದು.
4) ಕಾಮಗಾರಿಯನ್ನು ಜಿಲ್ಲಾಧಿಕಾರಿಗಳು, ಗುಲ್ಬರ್ಗಾ ಜಿಲ್ಲೆ ಇವರ ಮೇಲುಸ್ತುವಾರಿಯಲ್ಲಿ ಕೈಗೊಳ್ಳುವುದು.

5) ಇದು ಒಂದು ಬಾರಿ ಅನುದಾನವಾಗಿರುವುದರಿಂದ ಯಾವ ಉದ್ದೇಶಕ್ಕಾಗಿ ಹಣ ಬಿಡುಗಡೆ ಮಾಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಮಾತ್ರ ಬಳಸಿಕೊಳ್ಳುವುದು.

6) ಹಣ ಬಳಕೆ ಪ್ರಮಾಣ ಪತ್ರ ಪಡೆಯುವುದು.

ಈ ವೆಚ್ಚವನ್ನು 2010-11ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 2205-00-102-4-31-059 (ಯೋಜನೆ) ಇತರೆ ಖರ್ಚುಗಳಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ದಿನಾಂಕ: 24.07.2010ರ ಟಿಪ್ಪಣಿ ಸಂಖ್ಯೆ: ಶಿಇ 1453 ಐಎಫ್ (ಬಿ&ಎ) 2010 ರಲ್ಲಿ ಆಂತರಿಕ ಆರ್ಥಿಕ ಸಲಹೆಗಾರರ ಸಹಮತಿಯನ್ನು ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಕೆ. ಧರ್ಮರಾಜಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ

ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

ಪಿ.ಆರ್. 2384

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ :** ಕರ್ನಾಟಕ ರಾಜ್ಯದ ಸಣ್ಣ ಮತ್ತು ಮಧ್ಯಮ ಕೈಗಾರಿಕೆಗಳಿಗೆ ಸಂಬಂಧಿಸಿದಂತೆ "ವೆಂಚರ್ ಕ್ಯಾಪಿಟಲ್ ಫಂಡ್" ಅಡಿ ಅನುದಾನ ಬಿಡುಗಡೆ ಬಗ್ಗೆ.

**ಓದಲಾಗಿದೆ :**
1. ವ್ಯವಸ್ಥಾಪಕ ನಿರ್ದೇಶಕರು, ಕೆಎಸ್‌ಐಐಡಿಸಿ, ಬೆಂಗಳೂರು ಇವರ ಅ.ಸ.ಪ. ಸಂಖ್ಯೆ: ಎಂಡಿ/2009-10 ದಿನಾಂಕ: 3.02.2010.
2. 2009-10ರ ಆಯವ್ಯಯದ ಲೆಕ್ಕ ಶೀರ್ಷಿಕೆ "4852-02-800-0-04" ಅಡಿಯಲ್ಲಿ ₹.100 ಲಕ್ಷಗಳ ಅನುದಾನ.
3. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ ರವರ ಅಧ್ಯಕ್ಷತೆಯಲ್ಲಿ ದಿನಾಂಕ: 6.05.2010 ರಂದು ನಡೆದ ಸಭೆಯ ನಡವಳಿಗಳು.
4. ಆರ್ಥಿಕ ಇಲಾಖೆಯ ಅ.ಟಿ. ಸಂಖ್ಯೆ: ಎಫ್‌ಡಿ 886 ವೆಚ್ಚ-1/10 ದಿನಾಂಕ: 19.08.2010 ರಲ್ಲಿ ನೀಡಿರುವ ಅನುಮೋದನೆ.
5. ಅಪರ ನಿರ್ದೇಶಕರು (ಎಂಎಸ್‌ಎಂಇ), ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ರವರ ಪತ್ರ ಸಂಖ್ಯೆ: ಎಂಎಸ್‌ಎಂಇ:ಕೈವಿಅ: ವೆಕ್ಯಾಫ: 2010-11 ದಿನಾಂಕ: 18.08.2010.

**ಪ್ರಸ್ತಾವನೆ :**

ಮೇಲೆ (1) ರಲ್ಲಿ ಓದಲಾದ ಪತ್ರದಲ್ಲಿ, ವ್ಯವಸ್ಥಾಪಕ, ನಿರ್ದೇಶಕರು, ಕರ್ನಾಟಕ ರಾಜ್ಯ ಕೈಗಾರಿಕಾ ಬಂಡವಾಳ ಮತ್ತು ಅಭಿವೃದ್ಧಿ ನಿಗಮ ನಿಯಮಿತ (ಕೆಎಸ್‌ಐಐಡಿಸಿ), ಬೆಂಗಳೂರು ರವರ ಪ್ರಸ್ತಾವನೆ ಪರಿಶೀಲಿಸಿದೆ. ಕರ್ನಾಟಕ ರಾಜ್ಯದಲ್ಲಿ 1998ನೇ ಇಸವಿಯಲ್ಲಿ ಕರ್ನಾಟಕ ರಾಜ್ಯ ಹಣಕಾಸು ಸಂಸ್ಥೆ ಮತ್ತು SIDBI ರವರ ಸಹಯೋಗದೊಂದಿಗೆ ಕೆಎಸ್‌ಐಐಡಿಸಿ ರವರು ಒಂದು ಪ್ರಾದೇಶಿಕ ಬಂಡವಾಳ ನಿಧಿಯನ್ನು, ಮುಖ್ಯವಾಗಿ ಮಾಹಿತಿ ತಂತ್ರಜ್ಞಾನ ಘಟಕದಲ್ಲಿ ಸಣ್ಣ ಮತ್ತು ಮಧ್ಯಮ ಕೈಗಾರಿಕೆಗಳಿಗೆ ಉತ್ತೇಜನ ನೀಡುವ ಸಲುವಾಗಿ ಸ್ಥಾಪಿಸಿರುತ್ತಾರೆ. ಈ ನಿಧಿ ಪ್ರಸ್ತುತ ಮುಕ್ತಾಯದ ಹಂತದಲ್ಲಿದೆ. KITVEN ನಿಧಿಯ ಉತ್ತಮ ಬಳಕೆಯ ಹಿನ್ನೆಲೆಯಲ್ಲಿ KITVEN-2 ಯೋಜನೆಯನ್ನು ಈಗಾಗಲೇ ಅನುಷ್ಠಾನಗೊಳಿಸಲಾಗಿದೆ. ಈ ಎರಡೂ ನಿಧಿಗಳನ್ನು ಕೆಎಸ್‌ಐಐಡಿಸಿ, ಕರ್ನಾಟಕ ರಾಜ್ಯ ಹಣಕಾಸು ಸಂಸ್ಥೆ ಮತ್ತು SIDBI ರವರಿಂದ ಪ್ರಾಯೋಜಿತವಾದ KAMCO ಸಂಸ್ಥೆಯು ನಿರ್ವಹಿಸುತ್ತಿದೆ. ಈ ನಿಧಿಗಳಿಗೆ KATCO ಟ್ರಸ್ಟಿ ಆಗಿರುತ್ತದೆ.

ಮೇಲ್ಕಂಡ ವಲಯಗಳನ್ನು ಹೊರತುಪಡಿಸಿ ಕೃಷಿ, ಆಹಾರ ಸಂಸ್ಕರಣೆ, Clean Energy, Patent ಹೊಂದಿರುವ ಉತ್ಪನ್ನಗಳ ತಯಾರಿಕೆ, ಇಂತಹ ವಲಯಗಳನ್ನು ಉತ್ತೇಜಿಸುವ ಸಲುವಾಗಿ, ಅಂದಾಜು ₹.10 ಕೋಟಿಗಳ "Venture Capital Fund" ಒಂದನ್ನು ಸ್ಥಾಪಿಸುವ ಅವಶ್ಯಕತೆಯನ್ನು ಮನಗಂಡಿದೆ.

ಈ ಹಿನ್ನೆಲೆಯಲ್ಲಿ ಮಾನ್ಯ ಮುಖ್ಯಮಂತ್ರಿಗಳ ಆಯವ್ಯಯ ಭಾಷಣದಲ್ಲಿ ಘೋಷಿಸಿದಂತೆ, ಮೇಲೆ(2) ರಲ್ಲಿ ಓದಲಾದಂತೆ 2010-11ನೇ ಸಾಲಿನ ಆಯವ್ಯಯದಲ್ಲಿ ಸಣ್ಣ ಮತ್ತು ಮಧ್ಯಮ ಕೈಗಾರಿಕೆಗಳಿಗಾಗಿ "ಆಪತ್ತು ಬಂಡವಾಳ ನಿಧಿ" (Venture Capital Fund) ಯನ್ನು ಒದಗಿಸಿದ್ದು, ಯೋಜನೆಯನ್ನು ಅನುಷ್ಠಾನಗೊಳಿಸುವ ಸಲುವಾಗಿ ₹.100 ಲಕ್ಷಗಳನ್ನು ಬಿಡುಗಡೆ ಮಾಡುವಂತೆ ಪ್ರಸ್ತಾಪಿಸಿರುತ್ತಾರೆ.

ಮೇಲೆ (3) ರಲ್ಲಿ ಓದಲಾದ ದಿನಾಂಕ: 6.05.2010 ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ ರವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ "ಆಪತ್ತು ಬಂಡವಾಳ ನಿಧಿ" ಯನ್ನು ಸ್ಥಾಪಿಸಲು ನಿರ್ಧರಿಸಲಾಗಿದೆ. ಅದರಂತೆ ಆರ್ಥಿಕ ಇಲಾಖೆಯೂ ಸಹ ಕೆಲವು ಷರತ್ತುಗಳೊಂದಿಗೆ ಸದರಿ ನಿಧಿಯನ್ನು ಸ್ಥಾಪಿಸಲು ಅನುಮೋದನೆ ನೀಡಿರುತ್ತದೆ. ಈ ಹಿನ್ನೆಲೆಯಲ್ಲಿ ಪ್ರಸ್ತಾವನೆಯನ್ನು ಸಮಗ್ರವಾಗಿ ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಸಿಐ 234 ಎಸ್‌ಪಿಐ 2010, ಬೆಂಗಳೂರು, ದಿನಾಂಕ : 13.09.2010**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ ಸರ್ಕಾರವು ಈ ಕೆಳಕಂಡ ಅಂಶಗಳಿಗೆ ಅನುಮೋದನೆಯನ್ನು ನೀಡಿದೆ.

1) ಈ ಯೋಜನೆಯನ್ನು ಅನುಷ್ಠಾನಗೊಳಿಸಲು ಕರ್ನಾಟಕ ರಾಜ್ಯ ಕೈಗಾರಿಕಾ ಬಂಡವಾಳ ಮತ್ತು ಅಭಿವೃದ್ಧಿ ನಿಗಮ ನಿಯಮಿತ (ಕೆಎಸ್‌ಐಐಡಿಸಿ) ಸಂಸ್ಥೆಯನ್ನು "ನೋಡಲ್ ಏಜೆನ್ಸಿ" (ಅನುಷ್ಠಾನಗೊಳಿಸುವ ಸಂಸ್ಥೆ) ಎಂದು ತಕ್ಷಣದಿಂದ ಜಾರಿಗೆ ಬರುವಂತೆ ನೇಮಿಸಲಾಗಿದೆ.

2) ಈ ಯೋಜನೆಯಡಿ ಲೆಕ್ಕ ಶೀರ್ಷಿಕೆ "4852-02-800-0-04" ರಡಿ ಒದಗಿಸಲಾಗಿರುವ ₹.50 ಲಕ್ಷಗಳನ್ನು ಕೆಎಸ್‌ಐಐಡಿಸಿ ಸಂಸ್ಥೆಗೆ ಮೊದಲ ಕಂತಾಗಿ ಬಿಡುಗಡೆ ಮಾಡಲಾಗಿದೆ.

3) ಈ ಆದೇಶಕ್ಕೆ ಲಗತ್ತಿಸಿರುವ ಯೋಜನೆಯ ಮಾರ್ಗದರ್ಶಿ ಸೂತ್ರ ಹಾಗೂ ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಎಫ್‌ಡಿ 886 ವೆಚ್ಚ-1/10 ದಿನಾಂಕ: 19.08.2010 ರಲ್ಲಿ ವಿಧಿಸಿರುವ ಷರತ್ತು ಮತ್ತು ನಿಬಂಧನೆಗಳನ್ನು ಅನುಸರಿಸತಕ್ಕದ್ದು.

ಕೆಎಸ್‌ಐಐಡಿಸಿಯು ಸ್ವೀಕೃತ ಪತ್ರಕ್ಕೆ ಕೈಗಾರಿಕಾಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ರವರ ಮೇಲು ರುಜು ಪಡೆದು ಹಣವನ್ನು ಪಡೆಯತಕ್ಕದ್ದು.

ಈ ಆದೇಶವನ್ನು ಯೋಜನಾ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಪಿಡಿ 22 ಎಫ್‌ಆರ್ 2/2010 ದಿನಾಂಕ: 23.06.2010 ಹಾಗೂ ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಎಫ್‌ಡಿ 886 ವೆಚ್ಚ-1/10 ದಿನಾಂಕ: 19.08.2010 ರಲ್ಲಿ ನೀಡಿರುವ ಅಭಿಪ್ರಾಯದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ವಿ. ಶ್ರೀನಿವಾಸ ದೀಕ್ಷಿತ್**
ಪೀಠಾಧಿಕಾರಿ (ತಾಂತ್ರಿಕ ಕೋಶ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

ಪಿ.ಆರ್. 2385

## ಒಳಾಡಳಿತ ಸಚಿವಾಲಯ

**ವಿಷಯ :** ಕರ್ನಾಟಕ ಅಗ್ನಿಶಾಮಕ ಮತ್ತು ತುರ್ತು ಸೇವಾ ಇಲಾಖೆಯಲ್ಲಿ ಮೂರು ಪಾಳಿ ಪದ್ಧತಿಯನ್ನು ಜಾರಿಗೊಳಿಸುವ ಬಗ್ಗೆ.

**ಓದಲಾಗಿದೆ :** 1) ಅಗ್ನಿಶಾಮಕ ನಿರ್ದೇಶಕರ ಪತ್ರ ಸಂಖ್ಯೆ:ಸಿಬ್ಬಂದಿ (1) 609/91-92 ದಿನಾಂಕ: 18-3-2009.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಪತ್ರದಲ್ಲಿ ಪೊಲೀಸ್ ಮಹಾನಿರ್ದೇಶಕರು ಮತ್ತು ಪದನಿಮಿತ್ತ ಮಹಾನಿರ್ದೇಶಕರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ ಬೆಂಗಳೂರು ನಗರದಲ್ಲಿ ಪ್ರಸ್ತುತ 3 ಪಾಳಿಯಲ್ಲಿ ಕಾರ್ಯ ನಿರ್ವಹಿಸುತ್ತಿರುವ 4 ಠಾಣೆಗಳನ್ನು ಹೊರತುಪಡಿಸಿ ಹಾಲಿ ಕಾರ್ಯ ನಿರ್ವಹಿಸುತ್ತಿರುವ 8 ಠಾಣೆಗಳು 4 ಘಟಕಗಳು 3 ವಿಶೇಷ ವಾಹನಗಳಿಗೆ ಬೇಕಾಗಿರುವ ಹೆಚ್ಚುವರಿ ಸಿಬ್ಬಂದಿ ಜೊತೆ ಇತ್ತೀಚೆಗೆ ಮಂಜೂರಾಗಿದ್ದು ಶೀಘ್ರದಲ್ಲೇ ಪ್ರಾರಂಭವಾಗುವ 8 ಅಗ್ನಿಶಾಮಕ ಠಾಣೆಗಳಲ್ಲೂ ಸಹ ಮೂರು ಪಾಳಿ ಪದ್ಧತಿಯನ್ನು ಅಳವಡಿಸಬೇಕಿದ್ದು ಒಟ್ಟು 33 ಸಹಾಯಕ ಅಗ್ನಿಶಾಮಕ ಠಾಣಾಧಿಕಾರಿ ಹಾಗೂ ಇತರ ಹುದ್ದೆಗಳನ್ನು ಮಂಜೂರು ಮಾಡಬೇಕಾಗಿರುತ್ತದೆ ಅಧಿಕಾರಿ ಮಟ್ಟದಲ್ಲಿ ಬರೇ ಸಹಾಯಕ ಅಗ್ನಿಶಾಮಕ ಠಾಣಾಧಿಕಾರಿ ಹುದ್ದೆಯ ಸೃಜನೆಯ ಅವಶ್ಯವಿದ್ದು ಈ ಅಧಿಕಾರಿಗಳು ಪ್ರತಿಯೊಂದು ಪಾಳಿಯಲ್ಲಿ ಠಾಣೆ ಹಾಗೂ ಘಟಕಗಳ ಉಸ್ತುವಾರಿ ಕರ್ತವ್ಯವನ್ನು ನಿರ್ವಹಿಸುವುದರ ಜೊತೆಗೆ ಎಲ್ಲಾ ಅಗ್ನಿ ಹಾಗೂ ರಕ್ಷಣೆ ಕರೆಗೆ ಓಗೊಟ್ಟು ಕರ್ತವ್ಯ ನಿರ್ವಹಿಸಬೇಕಾಗಿರುವುದರಿಂದ, ಪ್ರತಿಯೊಂದು ಅಗ್ನಿಶಾಮಕ ಠಾಣೆಯಲ್ಲಿ ಸಹಾಯಕ ಅಗ್ನಿಶಾಮಕ ಠಾಣಾಧಿಕಾರಿಯವರ ಮೇಲುಸ್ತುವಾರಿ ನಿರ್ವಹಿಸಲು ಅಗ್ನಿಶಾಮಕ ಠಾಣಾಧಿಕಾರಿಗಳು ಲಭ್ಯವಿದ್ದು ಇವರು ಠಾಣೆಯ ಜವಾಬ್ದಾರಿಯನ್ನು ನಿರ್ವಹಿಸುವುದರಿಂದ ದಿನದ 24 ಘಂಟೆ ಠಾಣೆಯಲ್ಲೇ ಇದ್ದು ಅಗ್ನಿ ಹಾಗೂ ಠಾಣೆಯ ದೈನಂದಿನ ಚಟುವಟಿಕೆಗಳನ್ನು ನಿರ್ವಹಿಸಲು ಸಾಧ್ಯವಿಲ್ಲ. ಆದುದರಿಂದ, ಬೆಂಗಳೂರಿನ 16 ಅಗ್ನಿಶಾಮಕ ಠಾಣೆ ಹಾಗೂ 7 ಘಟಕ / ವಿಶೇಷ ವಾಹನಗಳಲ್ಲಿ 3 ಪಾಳಿ ಪದ್ಧತಿಯನ್ನು ಜಾರಿಗೆ ತರಲು ಒಟ್ಟು 33 ಸಹಾಯಕ ಅಗ್ನಿಶಾಮಕ ಠಾಣಾಧಿಕಾರಿ ಹಾಗೂ 237 ಇತರ ಹುದ್ದೆಗಳನ್ನು (ಒಟ್ಟು 270) ಮಂಜೂರು ಮಾಡಲು ಕೋರಿ ಈ ಹುದ್ದೆಗಳ ಮಂಜೂರಾತಿಯಿಂದ ವಾರ್ಷಿಕ ರೂ.4,17,38,664/- ರಷ್ಟು ಆವರ್ತಕ ವೆಚ್ಚವಾಗುವುದೆಂದು ತಿಳಿಸಿದ್ದಾರೆ.

ಅಗ್ನಿಶಾಮಕ ನಿರ್ದೇಶಕರ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 49 ಕಅಸೇ 2009, ಬೆಂಗಳೂರು, ದಿನಾಂಕ : 13-09-2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ 16 ಠಾಣೆಗಳ ಪೈಕಿ ಆಯಾ ಸ್ಥಳಗಳಲ್ಲಿ ಸಮೀಪದಲ್ಲಿರುವ ಎರಡು ಠಾಣೆಗಳಲ್ಲಿ ಒಂದು ಠಾಣೆಯಂತೆ ಈ ಕೆಳಗಿನ ಒಟ್ಟು 8 (ಎಂಟು) ಠಾಣೆಗಳಿಗೆ ಮಾತ್ರ 3 ಪಾಳಿ ವ್ಯವಸ್ಥೆಯನ್ನು ಜಾರಿಗೆ ತರಲು ಹಾಗೂ ಅವುಗಳ ಎದುರು ತೋರಿಸಿದ ಹುದ್ದೆಗಳನ್ನು ಮಂಜೂರು ಮಾಡಿ ಸರ್ಕಾರವು ಆದೇಶಿಸಿದೆ.

| ಕ್ರ. ಸಂ. | ಠಾಣೆಗಳು | ಸಹಾಯಕ ಅಗ್ನಿಶಾಮಕ ಠಾಣಾಧಿಕಾರಿ | ಪ್ರಮುಖ ಅಗ್ನಿಶಾಮಕ | ಅಗ್ನಿಶಾಮಕ ಚಾಲಕ | ಅಗ್ನಿಶಾಮಕರು | ಒಟ್ಟು |
|---|---|---|---|---|---|---|
| 1) | ಪೀಣ್ಯ | 01 | 02 | 02 | 12 | 17 |
| 2) | ಯಶವಂತಪುರ | 02 | 02 | 02 | 12 | 18 |
| 3) | ರಾಜಾಜಿನಗರ | 01 | 02 | 02 | 12 | 17 |
| 4) | ಎಂ.ಆರ್.ಪಾಳ್ಯ | 01 | 02 | 02 | 08 | 13 |
| 5) | ವೈಟ್ ಫೀಲ್ಡ್ | 01 | 02 | 02 | 08 | 13 |
| 6) | ಕುಕ್ ಟೌನ್ | 02 | 02 | 02 | 08 | 14 |
| 7) | ಬನಶಂಕರಿ | 01 | 02 | 02 | 08 | 13 |
| 8) | ಎಲೆಕ್ಟ್ರಾನಿಕ್ ಸಿಟಿ | 02 | 03 | 03 | 12 | 20 |

ಪ್ರಸ್ತಾವನೆಯಲ್ಲಿ ತಿಳಿಸಿರುವ ಉಳಿದ 7 ಅಗ್ನಿಶಾಮಕ ಘಟಕಗಳಿಗೆ 3 ಪಾಳಿ ವ್ಯವಸ್ಥೆಯನ್ನು ಒದಗಿಸಲು ಒಪ್ಪಿರುವುದಿಲ್ಲ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 197 ವೆಚ್ಚ-11/2010 ದಿನಾಂಕ: 19-08-2010 ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ.ಎಂ. ಲಕ್ಷ್ಮೀನಾರಾಯಣ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ, (ಪೊಲೀಸ್ ಸಹಾಯಕ ಸೇವೆಗಳು)

ಪಿ.ಆರ್. 2386

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ :** 2010–11ನೇ ಸಾಲಿಗೆ ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರಕ್ಕೆ ಆಡಳಿತಾತ್ಮಕ ವೆಚ್ಚಕ್ಕಾಗಿ ಎರಡನೇ ಕಂತಿನ ಮತ್ತು ಭೌಗೋಳಿಕ ಮಾಹಿತಿ ಪದ್ಧತಿ ಕೋಶ ಇದರ ವೆಚ್ಚಕ್ಕಾಗಿ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** (1) ಸರ್ಕಾರಿ ಆದೇಶ ಸಂಖ್ಯೆ: ಮಾತಂಇ 35 ಆಡವಿ 2010. ದಿನಾಂಕ: 15–04–10.

(2) ಸರ್ಕಾರಿ ಆದೇಶ ಸಂಖ್ಯೆ: ಮಾತಂಇ 57 ಆಡವಿ 2010. ದಿನಾಂಕ: 18–06–10.

(3) ನಿರ್ದೇಶಕರು ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರ ರವರ ಪತ್ರ ಸಂಖ್ಯೆ: ಕರಾದೂಸಂಅಕೇಂ/68/ಜಿಇಎನ್/2010. ದಿನಾಂಕ: 25–08–2010.

(4) ನಿರ್ದೇಶಕರು ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರ ರವರ ಪತ್ರ ಸಂಖ್ಯೆ: ಕರಾದೂಸಂಅಕೇಂ/71/ಜಿಇಎನ್/2010. ದಿನಾಂಕ: 27–08–2010.

**ಪ್ರಸ್ತಾವನೆ :**

2010–11ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕಶೀರ್ಷಿಕೆ "3451–00–090–2–08 ಕರ್ನಾಟಕ ರಾಜ್ಯ ದೂರ ಸಂವೇದಿಕ ತಂತ್ರಜ್ಞಾನ ಬಳಕೆ ಕೇಂದ್ರ–059 ಇತರೆ ಖರ್ಚು (ಯೋಜನೆ)" ರಡಿಯಲ್ಲಿ ರೂ. 350.00 ಲಕ್ಷಗಳ ಅನುದಾನವನ್ನು ಒದಗಿಸಲಾಗಿದೆ. ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ರೂ. 350.00 ಲಕ್ಷಗಳ ಒದಗಣೆ ಮೊತ್ತದಲ್ಲಿ ಸದರಿ ಸಂಸ್ಥೆಯ ಆಡಳಿತಾತ್ಮಕ ವೆಚ್ಚಕ್ಕಾಗಿ ರೂ. 150.00 ಲಕ್ಷಗಳನ್ನು ಹಾಗೂ ಭೌಗೋಳಿಕ ಮಾಹಿತಿ ಪದ್ಧತಿ ಕೋಶದ ಯೋಜನೆಗಾಗಿ ರೂ. 45.00 ಲಕ್ಷಗಳನ್ನು ನಿಗದಿಪಡಿಸಲಾಗಿದೆ.

ಮೇಲೆ (2) ರಲ್ಲಿ ಓದಲಾದ ದಿನಾಂಕ: 18–06–2010ರ ಸರ್ಕಾರಿ ಆದೇಶದಲ್ಲಿ ಕೇಂದ್ರದ ಆಡಳಿತಾತ್ಮಕ ವೆಚ್ಚಕ್ಕಾಗಿ ಒದಗಿಸಲಾಗಿರುವ ರೂ. 150.00 ಲಕ್ಷಗಳಲ್ಲಿ ಸದರಿ ಕೇಂದ್ರಕ್ಕೆ ರೂ. 37.50 ಲಕ್ಷಗಳನ್ನು ಮೊದಲನೆಯ ಕಂತಾಗಿ ಅನುದಾನ ಬಿಡುಗಡೆ ಮಾಡಲಾಗಿದೆ.

ಮೇಲೆ (3) ರಲ್ಲಿ ಓದಲಾದ ದಿನಾಂಕ: 25–08–2010ರ ಪತ್ರದಲ್ಲಿ ಜೂನ್ ಅಂತ್ಯದವರೆಗೆ ಭೌಗೋಳಿಕ ಮಾಹಿತಿ ಪದ್ಧತಿ ಕೋಶದ ಸಿಬ್ಬಂದಿಗಳ ವೇತನ ಹಾಗೂ ಇತರೆ ಖರ್ಚುಗಳಿಗಾಗಿ ರೂ. 12,48,630/–ಗಳನ್ನು ವೆಚ್ಚ ಮಾಡಿರುವುದಾಗಿ ತಿಳಿಸುತ್ತಾ, ಭೌಗೋಳಿಕ ಮಾಹಿತಿ ಪದ್ಧತಿ ಕೋಶದ ಅನುಷ್ಠಾನದ ಆಡಳಿತ ಮತ್ತು ಇತರೆ ವೆಚ್ಚಗಳಿಗಾಗಿ ಮೇಲೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ನಿಗದಿಪಡಿಸಲಾಗಿರುವ ರೂ. 45.00 ಲಕ್ಷಗಳ ಅನುದಾನ ಹಾಗೂ ಉಲ್ಲೇಖ (4)ರಲ್ಲಿನ ಪತ್ರದಲ್ಲಿ ಆಡಳಿತಾತ್ಮಕ ವೆಚ್ಚಕ್ಕಾಗಿ ರೂ. 37.50 ಲಕ್ಷಗಳನ್ನು ಎರಡನೆಯ ಕಂತಿನ ಅನುದಾನವಾಗಿ ಬಿಡುಗಡೆ ಮಾಡಲು ನಿರ್ದೇಶಕರು ಕೋರಿರುತ್ತಾರೆ.

ಸದರಿ ಪ್ರಸ್ತಾವನೆಗಳನ್ನು ಕೂಲಂಕಷವಾಗಿ ಪರಿಶೀಲಿಸಿ, ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ 2010–11ನೇ ಸಾಲಿಗೆ ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರದ ಆಡಳಿತಾತ್ಮಕ ವೆಚ್ಚಕ್ಕಾಗಿ ಒದಗಿಸಲಾಗಿರುವ ರೂ. 150.00 ಲಕ್ಷಗಳಲ್ಲಿ ಸದರಿ ಕೇಂದ್ರಕ್ಕೆ ರೂ. 37.50 ಲಕ್ಷಗಳನ್ನು ಎರಡನೆಯ ತ್ರೈಮಾಸಿಕ ಕಂತಿನ ಅನುದಾನವಾಗಿ ಬಿಡುಗಡೆ ಮಾಡಲು ಹಾಗೂ ಕೇಂದ್ರದ ಭೌಗೋಳಿಕ ಮಾಹಿತಿ ಪದ್ಧತಿ ಕೋಶದ ಅನುಷ್ಠಾನದ ವೆಚ್ಚಗಳಿಗಾಗಿ ಒದಗಿಸಲಾಗಿರುವ ರೂ. 45.00 ಲಕ್ಷಗಳಲ್ಲಿ ಮೊದಲನೆ ಹಾಗೂ ಎರಡನೆ ಕಂತಿನ ಅನುದಾನವಾಗಿ ರೂ. 22.50 ಲಕ್ಷಗಳನ್ನು ಒಟ್ಟು ಅಂದರೆ ರೂ. 60.00 ಲಕ್ಷಗಳು ಬಿಡುಗಡೆ ಮಾಡಲು ನಿರ್ಧರಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಐಟಿಡಿ 57 ಎಡಿಎಂ 2010, ಬೆಂಗಳೂರು, ದಿನಾಂಕ : 08–09–2010.**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ 2010–11ನೇ ಸಾಲಿಗೆ ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರದ ಆಡಳಿತಾತ್ಮಕ ವೆಚ್ಚಕ್ಕಾಗಿ ನಿಗದಿಪಡಿಸಲಾಗಿರುವ ರೂ. 150.00 ಲಕ್ಷಗಳಲ್ಲಿ ಎರಡನೆ ತ್ರೈಮಾಸಿಕ ಕಂತಿನ ಅನುದಾನವಾಗಿ ರೂ. 37.50 ಲಕ್ಷಗಳನ್ನು (ಮೂವತ್ತೇಳು ಲಕ್ಷದ ಐವತ್ತು ಸಾವಿರ ರೂಪಾಯಿಗಳು ಮಾತ್ರ) ಹಾಗೂ ಭೌಗೋಳಿಕ ಮಾಹಿತಿ ಪದ್ಧತಿ ಕೋಶದ ಅನುಷ್ಠಾನದ ವೆಚ್ಚಗಳಿಗಾಗಿ ನಿಗದಿಪಡಿಸಲಾದ ರೂ. 45.00 ಲಕ್ಷಗಳಲ್ಲಿ ಮೊದಲನೆ ಹಾಗೂ ಎರಡನೆ ಕಂತಿನ ಅನುದಾನವಾಗಿ ರೂ. 22.50 ಲಕ್ಷಗಳನ್ನು (ಇಪ್ಪತ್ತೆರಡು ಲಕ್ಷದ ಐವತ್ತು ಸಾವಿರ ರೂಪಾಯಿಗಳು ಮಾತ್ರ) ಅಂದರೆ ಒಟ್ಟು ರೂ. 60.00 ಲಕ್ಷಗಳ (ಅರವತ್ತು ಲಕ್ಷ ರೂಪಾಯಿಗಳು ಮಾತ್ರ) ಅನುದಾನವನ್ನು ಸದರಿ ಕೇಂದ್ರಕ್ಕೆ ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

ಈ ವೆಚ್ಚವನ್ನು 2010–11ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ **"3451–00–090–2–08 ಕರ್ನಾಟಕ ರಾಜ್ಯ ದೂರ ಸಂವೇದಿಕ ತಂತ್ರಜ್ಞಾನ ಬಳಕೆ ಕೇಂದ್ರ– 059 ಇತರೆ ಖರ್ಚು (ಯೋಜನೆ)"** ಇವರ ಅಡಿಯಲ್ಲಿ ಪ್ರಸಕ್ತ ಸಾಲಿನಲ್ಲಿ ಒದಗಿಸಿರುವ ಅನುದಾನದಿಂದ ಭರಿಸತಕ್ಕದ್ದು,

ನಿರ್ದೇಶಕರು, ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರ ಇವರು ಅನುದಾನದ ಬಳಕೆಯ ಬಗ್ಗೆ ಉಪಯೋಗಿತಾ ದೃಢೀಕರಣ ಪತ್ರವನ್ನು ಈ ಆರ್ಥಿಕ ವರ್ಷದೊಳಗಾಗಿ ಸರ್ಕಾರಕ್ಕೆ ಒದಗಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ: 16.5.08ರನ್ವಯ ಆರ್ಥಿಕ ಇಲಾಖೆಯ ಸಹಮತಿಯನ್ನು ಪರಿಭಾವಿಸಿ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ವಿ. ಕೃಷ್ಣಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ

ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ.

ಪಿ.ಆರ್. 2387

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ :** ಬೆಂಗಳೂರು ವಿದ್ಯುನ್ಮಾನ ನಗರದ ಜೈವಿಕ ತಂತ್ರಜ್ಞಾನ ಪಾರ್ಕ್‌ನ ಅಭಿವೃದ್ಧಿಗಾಗಿ ಹುಡ್ಕೋ ಸಾಲ – ಅಸಲು ಮತ್ತು ಬಡ್ಡಿಯ ಮರುಪಾವತಿಗಾಗಿ 2010ರ ಸೆಪ್ಟೆಂಬರ್ ಅಂತ್ಯದ 23ನೇ ಕಂತಿನ ಹಣ ಬಿಡುಗಡೆ ಬಗ್ಗೆ.

**ಓದಲಾಗಿದೆ :** 1) ಸರ್ಕಾರಿ ಆದೇಶ ಸಂಖ್ಯೆ: ಮಾತಂಇ 22 ಪಿಆರ್‌ಎಂ 2002 ದಿ: 6–3–03,

2) ಸರ್ಕಾರಿ ಆದೇಶ ಸಂಖ್ಯೆ ಐಟಿಡಿ 13 ಪಿಆರ್‌ಎಂ 2010, ದಿನಾಂಕ: 17–06–2010.

3) ನಿರ್ದೇಶಕರು, 'ಮಾತಂ ಜೈತಂ ನಿರ್ದೇಶನಾಲಯರವರ ಪತ್ರ ಸಂಖ್ಯೆ ಮಾತಂನಿ/ ಲೆಕ್ಕ–1/ಹುಡ್ಕೋ ಸಾಲ/487/2009–10, ದಿ: 19–08–10.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶ ದಿನಾಂಕ: 6–3–2003 ರಲ್ಲಿ ಬೆಂಗಳೂರು ವಿದ್ಯುನ್ಮಾನ ನಗರದ ಜೈವಿಕ ತಂತ್ರಜ್ಞಾನ ಪಾರ್ಕ್‌ನ ಅಭಿವೃದ್ಧಿಗಾಗಿ ಹುಡ್ಕೋ ಸಂಸ್ಥೆಯಿಂದ ರೂ. 20.00 ಕೋಟಿ ಸಾಲವನ್ನು ಎತ್ತುವಳಿ ಮಾಡಲು ಮಂಜೂರಾತಿ ನೀಡಲಾಗಿತ್ತು.

2005ನೇ ವರ್ಷದಿಂದ ಹುಡ್ಕೋ ಸಂಸ್ಥೆಯ ಅಸಲು, ಬಡ್ಡಿಯ ಮರುಪಾವತಿಯ ಕೆಬಿಟ್ಸ್ ಸಂಸ್ಥೆಗೆ ತ್ರೈಮಾಸಿಕ ಅನುದಾನಗಳನ್ನು ಸರ್ಕಾರವು ಆಗಿಂದಾಗ್ಗೆ ಬಿಡುಗಡೆ ಮಾಡುತ್ತಲಿದೆ.

2010–11ನೇ ಸಾಲಿನ ಆಯವ್ಯಯದಲ್ಲಿ ಸದರಿ ಸಾಲವನ್ನು ಮರುಪಾವತಿಸಲು ಬಾಬ್ತು ಲೆಕ್ಕಶೀರ್ಷಿಕೆ **'5465–01–190–1–08 (ಯೋಜನೇತರ ಮಾಹಿತಿ ಬಾಂಡುಗಳು 240 ಸಾಲ ಮೇಲುಸ್ತುವಾರಿ' ಇದರ ಅಡಿಯಲ್ಲಿ ರೂ. 325.00 ಲಕ್ಷ ಒದಗಿಸಲಾಗಿದೆ.**

ಮೇಲೆ (2)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಹುಡ್ಕೋ ಸಂಸ್ಥೆಗೆ 2010ರ ಜೂನ್ ಅಂತ್ಯದ 22ನೇ ತ್ರೈಮಾಸಿಕ ಕಂತಿನ ಬಾಬ್ತು ರೂ. 79,21,184/–ಗಳ ಪಾವತಿ ಮಾಡಲು ಕೆಬಿಟ್ಸ್ ಸಂಸ್ಥೆಗೆ ಅನುದಾನವನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ (3)ರಲ್ಲಿ ಓದಲಾದ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯದ ಪತ್ರದಲ್ಲಿ ಹುಡ್ಕೋ ಸಂಸ್ಥೆಗೆ 23ನೇ ಕಂತಿನ ಬಾಬ್ತು ಅಸಲು ರೂ. 62,49,767/– + ಬಡ್ಡಿ ಬಾಬ್ತು ರೂ. 15,48,118/– ಒಟ್ಟು ರೂ. 77,97,885/–ಗಳನ್ನು 2010 ಸೆಪ್ಟೆಂಬರ್ ಅಂತ್ಯದೊಳಗಾಗಿ ಪಾವತಿ ಮಾಡಬೇಕಾಗಿರುತ್ತದೆಂದು ತಿಳಿಸುತ್ತಾ, ಸದರಿ ಮೊತ್ತವನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಐಟಿಡಿ 13 ಪಿಆರ್ ಎಂ 2010, ಬೆಂಗಳೂರು, ದಿನಾಂಕ : 08–09–2010.**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ, ಹುಡ್ಕೋ ಸಾಲದ 2010ರ ಸೆಪ್ಟೆಂಬರ್ ಅಂತ್ಯದ 23ನೇ ತ್ರೈಮಾಸಿಕ ಕಂತಿನ ಅಸಲು ಮತ್ತು ಬಡ್ಡಿಯ ಬಾಬ್ತು ಪಾವತಿಸಲು ರೂ. 77,97,885/–ಗಳ (ಎಪ್ಪತ್ತೇಳು ಲಕ್ಷದ ತೊಂಬತ್ತೇಳು ಸಾವಿರದ ಎಂಟು ನೂರಾ ಎಂಬತ್ತೈದು ರೂಪಾಯಿಗಳು ಮಾತ್ರ) ಅನುದಾನವನ್ನು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

ಸದರಿ ಅನುದಾನವನ್ನು ಆಡಳಿತಾಧಿಕಾರಿಗಳು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರು ನಿರ್ದೇಶಕರು ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರ ಮೇಲು ಸಹಿ ಪಡೆದು ಖಜಾನೆಯಿಂದ ಸದರಿ ಅನುದಾನವನ್ನು ಡ್ರಾ ಮಾಡಿ ಅಪರ ವ್ಯವಸ್ಥಾಪಕ ನಿರ್ದೇಶಕರು, ಕೆಬಿಟ್ಸ್ ಸಂಸ್ಥೆ ಇವರಿಗೆ ವಿತರಿಸತಕ್ಕದ್ದು.

ಈ ವೆಚ್ಚವನ್ನು 2010–11ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ **'5465–01–190–1–08 (ಯೋಜನೇತರ ಮಾಹಿತಿ ಬಾಂಡುಗಳು 240 ಸಾಲ ಮೇಲುಸ್ತುವಾರಿ'** ಇದರ ಅಡಿಯಲ್ಲಿ ಒದಗಣೆ ಮಾಡಲಾದ ಅನುದಾನದಿಂದ ಭರಿಸತಕ್ಕದ್ದು,

ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ, ಇವರು ಸದರಿ ಅನುದಾನದ ಬಳಕೆ ಬಗ್ಗೆ ಕೆಬಿಟ್ಸ್ ಸಂಸ್ಥೆಯ ಅಪರ ವ್ಯವಸ್ಥಾಪಕ ನಿರ್ದೇಶಕರವರಿಂದ ಉಪಯೋಗಿತಾ ದೃಢೀಕರಣ ಪತ್ರವನ್ನು ಪಡೆದು ಸರ್ಕಾರಕ್ಕೆ ಒದಗಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ: 16.5.2008 ಇದರನ್ವಯ ಆರ್ಥಿಕ ಇಲಾಖೆಯ ಸಹಮತಿಯನ್ನು ಪರಿಭಾವಿಸಿ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ವಿ. ಕೃಷ್ಣಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ

ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

ಪಿ. ಆರ್. 2388

## ENERGY SECRETARIAT

**Sub:** Report of the Official Committee constituted by the Government of Karnataka to participate in the negotiations for the coal contract of M/s. Udupi Power Corporation Limited Plant.

**Read :** 1) G.O. No. EN 15 PPC 2005 dated: 09.04.2010.

2) G.O. No. EN 45 PPC 2010 dated: 01.06.2010.

3) G.O. No. EN 45 PPC 2010 dated: 22-.06.2010.

4) Finance Department Endorsement No.FD 1398 EXP.1/2010 dated: 23.08.2010

5) MD, KPTCL, DO letter No. PCKL /A1/12/2005-06/3107 dated: 28/8/2010

**PREAMBLE :**

The Power Purchase Agreement was entered into between distribution Companies of Karnataka and Udupi Power Corporation Limited (UPCL) erstwhile Nagarjuna Power Corporation Limited (NPCL) in 26.12.2005 for availing 90% of power from their 1015 MW Power Plant. The Government of Karnataka has approved in principle the enhancement of plant capacity from 1015 MW to 1500 MW. Ministry of Environment & Forests, Govt. of India vide letter dated: 9.9.2009 approved only 1200 MW.

2. The then NPCL entered into Fuel Supply Agreements for sourcing imported coal from the following 4 sources (2 mining cos. & 2 Trading Cos.), with a firm FOB price for 5 years, fixed Freight price for 12 years. The FOB price beyond 5th year was to be on mutually agreed indexation.

a) M/s. PT Adaro

b) M/s. PT Indominco

c) M/s/ Glencore International AG

d) M/s. Aditya Energy Resources PTE Limited

3. The Fuel Suppliers of UPCL contested that the change in Indonesian Law and the directions of the Director General, Ministry of Energy and Mineral Resources, Republic of Indonesia, have forced them to renegotiate the prices at which coal has to be supplied. On the request of M/s. Udupi Power Corporation Limited (UPCL), the Government of Karnataka constituted a Committee vide Government Order read at (1) above and letter dated: 15.04.2010 to visit Indonesia and participate in the negotiations with the fuel suppliers of M/s. UPCL. A team of Officers visited Indonesia from 22nd April 2010 to 29th April 2010. The Committee submitted its report to the Government. The report was placed before the Cabinet Meeting held on 24.05.2010. Based on the decision of the Cabinet, Government in its order read at (2) above communicated approval for the following:

i) The fuel for the project should be procured through competitive bidding process.

ii) M/s. Udupi Power Corporation Limited to negotiate within the limits of the existing Agreement with the Fuel Supply Agreement Holders.

iii) M/s. Udupi Power Corporation Limited to call short term tender for purchase of coal as recommended in the report of the Official Committee.

iv) While calling for the tenders for supply of coal, the modified Gross Calorific Value (GCV) to be considered as mentioned in the Official Committee Report to suit the Boiler Turbine Generator (BTG)

4. In Pursuance to the above, M/s. UPCL started negotiations with the original Fuel Suppliers. Owing to the synchronization of Unit 1 on 3rd June 2010 and shortage of coal, M/s. UPCL again requested Government of Karnataka to send a team of officers who could also participate and conclude the negotiations in the interest of early supply of coal and commencement of power supply. The Government thus constituted an official Committee vide Government Order read at (3) above, to discuss and conclude the negotiations with the coal contractors at Jakarta in respect of UPCL.

5. A team of officers visited Indonesia from 22.06.2010 to 28.06.2010 and participated along with M/s. UPCL in the negotiation with the fuel suppliers. The Official Committee has submitted its report to the Government on 27.07.2010.

6. The Official Committee in its Report has made the following recommendations/ Course of Action:

a. The negotiated rates for M/s. PT Adaro & M/s. PT Indominco based on the DG, Indonesia International Index at FOB price for each shipment delivered in any calendar quarter shall be the arithmetic average of HBA Price Marker, promulgated by DG, Indonesia in the immediate prior quarter.

b. Only 1.0 MTPA coal from M/s. PT Adaro needs be procured.

c. M/s. Glencore offered 3% discount on New Castle Global Coal Index and the same being on higher side should not be accepted till revised offer from M/s. Glencore is received bringing the prices closer to the rates offered by M/s. PT Indominco.

d. If no revised offer received from M/s. Glencore within a week then M/s. Glencore offer be rejected.

e. UPCL to call for Long Term Tender based on quantity and specification indicated in para VII (1).

1. 635 MTPA of GCV of 6200 kcal/kg ARB
(if M/s. Glencore is accepted)

2. 135 MTPA of GCV of 6200 kcal/kg ARB
(if M/s. Glencore is rejected)

f. UPCL to diligently follow up on the Long Term Tender so as to ensure adequate availability of coal by December 2010.

g. The UPCL in the existing FSA's with M/s. PT Indominco and M/s. Glencore had ± 10% variation clause with respect to the quantities. For operational flexibility, UPCL may be allowed to increase or decrease the quantities by ±25% over and above the

contracted quantities on long term (in case of M/s. Glencore, it is subjected to acceptance of the offer by Government).'

h. UPCL is also advised to seek Contract Performance Guarantee from Fuel Supplies in their own interest.

7. The Managing Director, KPTCL vide letter dated: 27.07.2010 hased that M/s. Glencore has still date failed to respond to the Request of Committee during negotiations.

8. This subject was referred to Finance Department. Finance Department vide endorsement read at (4) above, has made some reservations on this subject. Managing Director, KPTCL vide D.O. letter read at (5) above, has submitted clarifications on the observations of the finance Department.

9. In the circumstances mentioned above, the following orders are issued:

**GOVERNMENT ORDER No : EN 45 PPC 2010, BANGALORE, DATED : 3rd SEPTEMBER 2010**

Under the circumstances explained in the Preamble, Government released to accord approval for the following :

i) To adopt DG, Indonesia International Index (HBA Price Marker) for FOB price for procuring 1.0 MTPA of coal from M/s. PT Adaro and 0.5 MTPA of coal from M/s. PT Indominco. The FOB price for each shipment delivered in any calendar quarter shall be the arithmetic average of HBA Price Marker, promulgated by DG, Indonesia in the immediate prior quarter.

ii) To procure only 1.0 MTPA (as against 1.2 MTPA) coal from M/s. PT Adaro and 0.5 MTPA of coal from M/s. PT Indominco. As per the existing Fuel Supply Agreement conditions except for the FOB price duly following the provisions of the Power Purchase Agreement under clause 4.7 (d).

iii) As M/s. Aditya Energy Resources PTE Limited had not supplied any coal as per the exisiting contract, UPCL to initiate. Necessary legal action against M/s. Aditya Energy Resources PTE Limited as per the provision of FSA.

iv) For operational flexibility, UPCL is allowed to increase of decrease the quantities by ± 25% over and above the quantities on long term with the prior concurrence of Electricity Supply Companies.

v) The negotiated FSA with M/s. Adaro and with M/s. PT Indominco be limited for the period up to December 2014. Any further extension should be based on competitiveness of the pricing, and further negotiation at that stage with the prior approval of principal buyers (Electricity Supply Companies of Karnataka) / Government of Karnataka.

A Separate Government Order will be issued in due course for procuring coal from M/s. Glencore and quantum of coal to be procured on long term basis by M/s. Udupi Power Corporation Limited for their 1200 MW Thermal Power Plant.

By order and in the name of the Governor of Karnataka,

**S.J. SAMPATH KUMAR**

Under Secretary to Government

P. R. 2389 Energy Department

## COMMERCE & INDUSTRIES SECRETARIAT

**Sub :** Visit of Karnataka delegation to China – reg**.**

**Ref :** 1. Official Memorandum No. AA/122/03/2010-411 dated: 23.8.2010 issued by Deputy Secretary (Coord), MEA.

2. Official Memorandum No. AA/122/01/2010-537 dated: 18.8.2010 issued by Deputy Secretary (Coord), MEA.

3. Government Order CI 406 SPI 2010 Bangalore dated: 19.8.2010.

**PREAMBLE :**

A high level delegation lead by Hon'ble Chief Minister is visiting China to participate in Annual Meeting of New Champions organized by world Economic Forum from 13th to 15th September, 2010. The delegation will also visit Shanghai and Hong Kong.

The Ministry of External Affairs, Government of India has accorded Political Clearance for the above visit vide OMs of MEA cited at Ref 1 & 2.

Further the Government of Karnataka has sanctioned Rs. 34 lakhs for the above visit vide Government Order cited at Ref (3).

**GOVERNMENT ORDER NO : CI 406 SPI 2010, BANGALORE, DATED : 6TH SEPTEMBER 2010**

Under the above circumstances, sanction is hereby accorded to Indian Consulate at Hong Kong to incur expenditure towards making necessary arrangements for accommodation and transport for the visit of the delegation. The expenditure will be reimbursed by Government of Karnataka.

By order and in the name of the Government of Karnataka,

**A.V. SRINIVASA DIKSHIT**

Desk Officer (Technical Cell)

P. R. 2390 Commerce & Industries Dept.

## COMMERCE & INDUSTRIES SECRETARIAT

**Sub :** Visit of Karnataka delegation to China – reg.

**Ref :** 1. Official Memorandum No. AA/122/03/2010-411 dated: 23.8.2010 issued by Deputy Secretary (Coord), MEA.

2. Official Memorandum No. AA/122/01/2010-537 dated: 18.8.2010 issued by Deputy Secretary (Coord), MEA.

3. Government Order CI 406 SPI 2010 Bangalore dated: 19.8.2010.

**PREAMBLE :**

A high level delegation lead by Hon'ble Chief Minister is visiting China to participate in Annual Meeting of New Champions organized by world Economic Forum from 13th to 15th September, 2010. The delegation will also visit Shanghai and Hong Kong.

The Ministry of External Affairs, Government of India has accorded Political Clearance for the above visit vide OMS of MEA cited at Ref 1 & 2.

Further the Government of Karnataka has sanctioned Rs. 34 lakhs for the above visit vide Government Order cited at Ref (3).

**GOVERNMENT ORDER NO : CI 406 SPI 2010, BANGALORE, DATED : 7TH SEPTEMBER 2010**

Under the above circumstances, sanction is hereby accorded to Indian Embassy at Beijing to incur expenditure towards making necessary arrangements for accommodation and transport for the visit of the delegation. The expenditure will be reimbursed by Government of Karnataka.

By order and in the name of the Governor of Karnataka,

**A.V.SRINIVASA DIKSHIT**

Desk Officer (Technical Cell)

P. R. 2391 Commerce & Industries Dept.

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ಮೆ: ರಾಜಶ್ರೀ ಪ್ಯಾಕೇಜರ್ಸ್ ಲಿಮಿಟೆಡ್ ಅವರಿಗೆ ನೀಡಲಾಗಿರುವ ಸ್ಥಿರಾಸ್ತಿ ಬಂಡವಾಳ ಹೂಡಿಕೆ ಪ್ರಮಾಣ ಪತ್ರದಲ್ಲಿ ಸ್ಥಿರಾಸ್ತಿ ಮೌಲ್ಯಕ್ಕೆ ಹೆಚ್ಚುವರಿ ₹.13.99 ಕೋಟಿ ಸೇರಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ: ಸಿಐ 21 ಎಸ್‌ಪಿಐ 2004 ದಿ: 11.02.2004.

2. ಸರ್ಕಾರಿ ಆದೇಶ ಸಂಖ್ಯೆ: ಸಿಐ 163 ಎಸ್ ಪಿ ಐ 2008(ಪಿ) ದಿ: 22.12.2009.

3. ಸದರಿ ಘಟಕಕ್ಕೆ ನೀಡಿರುವ ತಿದ್ದುಪಡಿ ಎಫ್.ಎ.ವಿ.ಸಿ.ಸಂಖ್ಯೆ: ಐಡಿ/ಇ2/ಸಿಐ/188/2003–04 ದಿನಾಂಕ: 30.12.2009.

4. ದಿನಾಂಕ: 18.08.2010 ರಂದು ನಡೆದ 101ನೇ ರಾಜ್ಯ ಮಟ್ಟದ ಸಮನ್ವಯ ಸಮಿತಿ ಸಭೆಯ ನಡವಳಿಗಳು.

5. ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯ ಪತ್ರ ಸಂಖ್ಯೆ: ಕೈಅ/ಇ1/ಎಫ್‌ಎವಿಸಿ/ರಾಜಶ್ರೀ/2009–10 ದಿನಾಂಕ: 2.09.2010

**ಪ್ರಸ್ತಾವನೆ :**

ಮೆ: ರಾಜಶ್ರೀ ಪ್ಯಾಕೇಜರ್ಸ್ ಲಿ. ಅವರು ದಿನಾಂಕ: 20.01.2010 ರಂದು ಮನವಿಯೊಂದನ್ನು ಸಲ್ಲಿಸಿ, ದಿನಾಂಕ: 1.01.2004 ರಿಂದ 28.06.2004 ರವರೆಗೆ ಹೂಡಲಾದ ಬಂಡವಾಳ ₹.13.99 ಕೋಟಿ ತಮ್ಮ ಮೂಲ ಅನುಮೋದಿತ ಯೋಜನೆಯ ವಿವಿಧ ಹಂತದ ಬಂಡವಾಳವಾಗಿದ್ದು, ಅದನ್ನು ಪೈಪ್ ಲೈನ್ ಸ್ಟೇಟಸ್ ಎಂದು ಪರಿಗಣಿಸಿ, ಮಾರಾಟ ತೆರಿಗೆ ವಿನಾಯಿತಿ ಸಂಬಂಧ ನೀಡಲಾದ ಸ್ಥಿರಾಸ್ತಿ ಬಂಡವಾಳ ಹೂಡಿಕೆ ಪ್ರಮಾಣಪತ್ರ (ಎಫ್‌ಎವಿಸಿ) ದಲ್ಲಿ ಸೇರಿಸಬೇಕೆಂದು ವಿನಂತಿಸಿಕೊಂಡಿರುತ್ತಾರೆ. ಸದರಿಯವರ ಮನವಿಯನ್ನು ದಿನಾಂಕ: 18.08.2010 ರಂದು ನಡೆದ 101ನೇ ರಾಜ್ಯ

ಮಟ್ಟದ ಸಮನ್ವಯ ಸಮಿತಿ ಸಭೆಯಲ್ಲಿ ಸುದೀರ್ಘವಾಗಿ ಚರ್ಚಿಸಲಾಗಿದ್ದು, ದಿನಾಂಕ: 6.01.2000 ದಂದು ನಡೆದ 68ನೇ ರಾಜ್ಯ ಮಟ್ಟದ ಸಮನ್ವಯ ಸಮಿತಿ ಸಭೆಯ ತೀರ್ಮಾನದಂತೆ ಕೈಗಾರಿಕಾ ಘಟಕಗಳು ಬಂಡವಾಳ ಹೂಡುವ ಸಂದರ್ಭದಲ್ಲಿ ಅವರ ಅನುಮೋದಿತ ಯೋಜನಾ ವರದಿಯಂತೆ ಹಂತಹಂತವಾಗಿ ಹೂಡುವ ಬಂಡವಾಳವನ್ನು ಮೂಲ ಯೋಜನೆಯಂತೆಯೇ ಪರಿಗಣಿಸಿ ರಿಯಾಯಿತಿ ಮತ್ತು ಪ್ರೋತ್ಸಾಹಗಳನ್ನು ನೀಡಬಹುದೆಂದು ನಿರ್ಧರಿಸಲಾಗಿರುತ್ತದೆ. ಈ ಪ್ರಕಾರ ಮೆ: ರಾಜಶ್ರೀ ಪ್ಯಾಕೇಜರ್ಸ್ ಲಿ. ಅವರು ಹೂಡಲಾದ ಹೆಚ್ಚುವರಿ ಬಂಡವಾಳ ₹.13.99 ಕೋಟಿಗಳನ್ನು ಮೂಲ ಯೋಜನೆಯ ವಿವಿಧ ಹಂತದ ಬಂಡವಾಳ ಹೂಡಿಕೆ ಎಂದು ಪರಿಗಣಿಸಿ, ಸ್ಥಿರಾಸ್ತಿ ಬಂಡವಾಳ ಹೂಡಿಕೆ ಪ್ರಮಾಣ ಪತ್ರದಲ್ಲಿ ಸೇರ್ಪಡಿಸಲು ತೀರ್ಮಾನ ತೆಗೆದುಕೊಳ್ಳಲಾಯಿತು.

ಆದುದರಿಂದ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಿಐ 163 ಎಸ್‌ಪಿಐ 2008 (ಪಿ) ಬೆಂಗಳೂರು, ದಿನಾಂಕ: 07–09–2010**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ, ಮೆ: ರಾಜಶ್ರೀ ಪ್ಯಾಕೇಜರ್ಸ್ ಲಿ. ಅವರು ದಿನಾಂಕ: 28.06.2004 ರವರೆಗೆ ಹೂಡಲಾದ ಹೆಚ್ಚುವರಿ ಬಂಡವಾಳ ₹13.99 ಕೋಟಿಗಳನ್ನು ಅವರಿಗೆ ಮೇಲೆ ಓದಲಾದ (3) ರಲ್ಲಿ ನೀಡಲಾದ ಸ್ಥಿರಾಸ್ತಿ ಬಂಡವಾಳ ಹೂಡಿಕೆ ಪ್ರಮಾಣ ಪತ್ರದಲ್ಲಿ ಸೇರಿಸಲು ಸರ್ಕಾರವು ಈ ಮೂಲಕ ಅನುಮತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ವಿ. ಶ್ರೀನಿವಾಸ ದೀಕ್ಷಿತ್**
ಪೀಠಾಧಿಕಾರಿ (ತಾಂತ್ರಿಕ ಕೋಶ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

ಪಿ.ಆರ್. 2392

## ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ :** ಕೊಡಗು ಜಿಲ್ಲೆ, ವಿರಾಜಪೇಟೆ ಕಂದಾಯ ತಾಲ್ಲೂಕಿನಲ್ಲಿ ಖಾಲಿ ಇರುವ ನೋಟರಿ ಹುದ್ದೆಯನ್ನು ಭರ್ತಿ ಮಾಡುವ ಬಗ್ಗೆ. (ಶ್ರೀ ಎನ್.ಎ.ಉತ್ತಪ್ಪ ಇವರ ನಿಧನದಿಂದ ತೆರವು)

**ಓದಲಾಗಿದೆ :**
1. ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಕೊಡಗು ಇವರ ಪತ್ರ ಸಂಖ್ಯೆ ಡಿಇಎಸ್.ನಂ. ಎಡಿಎಂಎನ್ 1078/2010 ದಿನಾಂಕ: 22/23–03–2010.
2. ಸರ್ಕಾರದ ಪತ್ರ ಸಂಖ್ಯೆ ಲಾ 79 ಎಲ್‌ಸಿಎಲ್ 2008 ದಿನಾಂಕ: 16–04–2010.
3. ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಕೊಡಗು ಇವರ ಪತ್ರ ಸಂಖ್ಯೆ ಡಿಇಎಸ್ ನಂ ಎಡಿಎಂಎನ್ 2267/2010, ದಿನಾಂಕ: 26/28–06–2010.
4. ನೋಟರಿಗಳ ತಿದ್ದುಪಡಿ ನಿಯಮಗಳು 2009ರ ಅಧಿಸೂಚನೆ ಸಂ. GSR 114(E) ದಿನಾಂಕ: 24.02.2009.
5. ಅಧಿಸೂಚನೆ ಸಂಖ್ಯೆ ಲಾ 61 ಎಲ್‌ಸಿಎಲ್ 2009 ದಿನಾಂಕ: 24–07–2010
6. ಸಂದರ್ಶನ ಸೂಚನಾ ಪತ್ರ ಸಂಖ್ಯೆ:ಲಾ 79 ಎಲ್‌ಸಿಎಲ್ 2008 ದಿನಾಂಕ: 29–07–2010.

**ಪ್ರಸ್ತಾವನೆ :**

ಮೇಲೆ (1) ರಲ್ಲಿ ಓದಲಾದ ದಿನಾಂಕ: 22/23–03–2010ರ ಪತ್ರದಲ್ಲಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಕೊಡಗು ಇವರು ಶ್ರೀ ಎನ್.ಎ.ಉತ್ತಪ್ಪ, ನೋಟರಿ, ವಿರಾಜಪೇಟೆ ಇವರ ನಿಧನದಿಂದ ತೆರವಾದ ಜಾಗ ಭರ್ತಿಮಾಡಲು ಅಧಿಸೂಚನೆ ಹೊರಡಿಸಬಹುದೆಂದು ತಿಳಿಸಿದ್ದರ ಮೇರೆಗೆ ಸದರಿ ನೋಟರಿ ಹುದ್ದೆಯನ್ನು ಭರ್ತಿ ಮಾಡಲು ನೋಟರಿಗಳ ಅಧಿನಿಯಮ/ನಿಯಮಗಳು ಹಾಗೂ ಕಾನೂನು ಅಧಿಕಾರಿಗಳ (ನೇಮಕಾತಿ ಮತ್ತು ಸೇವಾ ಷರತ್ತು) ನಿಯಮಗಳಡಿಯಲ್ಲಿ ಪರಿಶೀಲಿಸಿ ಸೂಕ್ತ ಪ್ರಸ್ತಾವನೆಯನ್ನು ಕಳುಹಿಸಿಕೊಡುವಂತೆ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಕೊಡಗು ಇವರನ್ನು ಮೇಲೆ (2) ರಲ್ಲಿ ಓದಲಾದ ದಿನಾಂಕ: 16–04–2010ರ ಪತ್ರದಲ್ಲಿ ಕೋರಲಾಗಿತ್ತು.

ಅದರಂತೆ ಮೇಲೆ (3)ರಲ್ಲಿ ಓದಲಾದ ದಿನಾಂಕ: 26/28–06–2010ರ ಪತ್ರದಲ್ಲಿ 6 ಜನರ ಮೆಮೋರಿಯಲ್ಸ್‌ಗಳನ್ನೊಳಗೊಂಡ ಪ್ರಸ್ತಾವನೆಯನ್ನು ಸಲ್ಲಿಸಿದ್ದರು. ಆ ಪ್ರಸ್ತಾವನೆಯನ್ನು ಮೇಲೆ (4)ರಲ್ಲಿ ಓದಲಾದ ನೋಟರಿಗಳ ತಿದ್ದುಪಡಿ ನಿಯಮಗಳು 2009 ರನ್ವಯ ಕರ್ನಾಟಕ ರಾಜ್ಯದಿಂದ ನೋಟರಿಗಳ ನೇಮಕಕ್ಕಾಗಿ ಮೇಲೆ (5)ರಲ್ಲಿ ಓದಲಾದ ದಿನಾಂಕ: 24–07–2010ರ ಅಧಿಸೂಚನೆಯಲ್ಲಿ ರಚಿಸಲಾಗಿರುವ ಸಂದರ್ಶನ ಮಂಡಳಿಯ ಪರಿಶೀಲನೆಗೆ ಕಳಿಸಿ ಎಲ್ಲಾ ಅಭ್ಯರ್ಥಿಗಳನ್ನು ಸಂದರ್ಶನ ಮಂಡಳಿಯ ಮುಂದೆ ಸಂದರ್ಶನಕ್ಕೆ ಹಾಜರಾಗುವಂತೆ ಮೇಲೆ (6) ರಲ್ಲಿ ಓದಲಾದ ದಿನಾಂಕ: 29–07–2010ರ ಸಂದರ್ಶನ ಸೂಚನಾ ಪತ್ರದಲ್ಲಿ ಸೂಚಿಸಲಾಗಿತ್ತು. ಸಂದರ್ಶನ ಮಂಡಳಿಯು ಸಂದರ್ಶನ ನಡೆಸಿ ದಿನಾಂಕ: 18–08–2010 ರಂದು ಆಯ್ಕೆ ಪಟ್ಟಿಯನ್ನು ಸಲ್ಲಿಸಿದೆ.

ಸಂದರ್ಶನಾ ಮಂಡಳಿಯ ಶಿಫಾರಸ್ಸನ್ನು ಸರ್ಕಾರವು ಪರಿಗಣಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಲಾ 79 ಎಲ್‌ಸಿಎಲ್ 2008, ಬೆಂಗಳೂರು, ದಿನಾಂಕ : 13–09–2010.**

ನೋಟರಿ ಅಧಿನಿಯಮ (1952) ಹಾಗೂ ಇದರ ಅಡಿಯಲ್ಲಿ ರಚಿಸಲಾಗಿರುವ ನೋಟರಿ ನಿಯಮಗಳು (1956) ಹಾಗೂ ತದನಂತರದ ತಿದ್ದುಪಡಿ ನಿಯಮಗಳ ನಿಯಮ 8(1)ರಲ್ಲಿ ಪ್ರದತ್ತವಾಗಿರುವ ಅಧಿಕಾರದಂತೆ ಶ್ರೀ ವಿ.ಪಿ.ರಮೇಶ್, ವಕೀಲರು, ಮಗ್ಗುಲ ವಿಲೇಜ್, ಐಮಂಗಲ ಅಂಚೆ, ವಿರಾಜಪೇಟೆ ತಾಲ್ಲೂಕು, ಕೊಡಗು ಜಿಲ್ಲೆ, ಇವರನ್ನು ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ವಿರಾಜಪೇಟೆ ಕಂದಾಯ ತಾಲ್ಲೂಕಿನಲ್ಲಿ ನೋಟರಿಯನ್ನಾಗಿ ನೇಮಿಸಿದೆ.

ಸದರಿ ವಕೀಲರು ಲೆಕ್ಕ ಶೀರ್ಷಿಕೆ 0070–ಇತರೆ ಆಡಳಿತಾತ್ಮಕ ಸೇವೆಗಳು–01–ನ್ಯಾಯಪರಿಪಾಲನೆ–501–0–ಇತರೆ ಸ್ವೀಕೃತಿಗಳು–06 ಇತರೆ ಬಾಬುಗಳಿಗೆ (0070–01–501–0–06) ನೋಟರಿ ನಿಯಮಗಳಲ್ಲಿ ನಿಗದಿಪಡಿಸಲಾದ ರೂ. 1000.00 (ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಸರ್ಕಾರಿ ಖಜಾನೆಯಲ್ಲಿ ಜಮಾ ಮಾಡಿ ಆ ಬಗೆಗಿನ ಮೂಲ ಚಲನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಅವರಿಗೆ ವೃತ್ತಿ ಪ್ರಮಾಣ ಪತ್ರ ನೀಡಲಾಗುವುದು.

ವೃತ್ತಿ ಪ್ರಮಾಣ ಪತ್ರ ನೀಡಿದ ನಂತರ ಶ್ರೀಯುತರ ಹೆಸರನ್ನು ನೋಟರಿ ಅಧಿನಿಯಮ (1952)ರ ಕಲಂ 4ನೇ ಪ್ರಕರಣದಡಿ ಸರ್ಕಾರ ನಿರ್ವಹಿಸುತ್ತಿರುವ ಪಟ್ಟಿಯಲ್ಲಿ ನಮೂದಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಆರ್. ಶಕುಂತಲಾ**

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–2)

ಕಾನೂನು ನ್ಯಾಯ ಮತ್ತು ಮಾನವ

ಪಿ.ಆರ್. 2393 ಹಕ್ಕುಗಳ ಇಲಾಖೆ.

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ** : ಬಾಲನ್ಯಾಯ (ಮಕ್ಕಳ ರಕ್ಷಣೆ ಮತ್ತು ಪೋಷಣೆ) ಕಾಯ್ದೆ 2000ರಡಿ ನಿರ್ವಹಿಸುತ್ತಿರುವ ವೀಕ್ಷಣಾಲಯ ಬಾಲಮಂದಿರಗಳನ್ನು ಪರಿವರ್ತಿಸುವ ಹಾಗೂ ಕಾರ್ಯ ವ್ಯಾಪ್ತಿ ನಿಗದಿಪಡಿಸುವ ಬಗ್ಗೆ.

**ಓದಲಾಗಿದೆ** : 1) ದಿನಾಂಕ: 15.12.2007 ರ ಸರ್ಕಾರದ ಆದೇಶ ಸಂಖ್ಯೆ: ಮಮಇ 102 ಮಭಾಬ 2004 (ಭಾ)

2) ದಿನಾಂಕ: 08.02.2008 ರ ಸರ್ಕಾರದ ಆದೇಶ ಸಂಖ್ಯೆ: ಮಮಇ 102 ಮಭಾಬ 2004.

3) ದಿನಾಂಕ: 01.10.2008 ರ ಸರ್ಕಾರದ ಆದೇಶ ಸಂಖ್ಯೆ: ಮಮಇ 142 ಮಮಅ 2008 (ಭಾ)

4) ದಿನಾಂಕ: 17.05.2010 ರ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ನಿರ್ದೇಶಕರ ಏಕ ಕಡತ ಪ್ರಸ್ತಾವನೆ ಸಂಖ್ಯೆ: ಮಮಅಇ:ಸು.ಶಾ:ಪ–ಅ–2:30:10–11.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಆದೇಶದಲ್ಲಿ ಉಡುಪಿ ಮತ್ತು ಚಿಕ್ಕಮಗಳೂರು ಜಿಲ್ಲೆಯ ಬಾಲಕರ ಬಾಲ ಮಂದಿರಗಳನ್ನು, ಕೆ.ಜಿ.ಎಫ್. ಮತ್ತು ಬೆಂಗಳೂರು ಗ್ರಾಮಾಂತರ ಜಿಲ್ಲೆಗಳ ಬಾಲಕಿಯರ ಬಾಲಮಂದಿರಗಳನ್ನು, ಕೋಲಾರ ಮತ್ತು ಚಿಕ್ಕಮಗಳೂರು ಜಿಲ್ಲೆಯ ಬಾಲಕಿಯರ ಬಾಲಮಂದಿರಗಳನ್ನು ಹಾಗೂ ಬೀದರ್, ತುಮಕೂರು, ರಾಯಚೂರು, ಮಂಡ್ಯ, ಬೆಳಗಾಂ ಜಿಲ್ಲೆಗಳ ಸ್ವೀಕಾರ ಕೇಂದ್ರಗಳನ್ನು ವೀಕ್ಷಣಾಲಯಗಳನ್ನಾಗಿ ಅಲ್ಲಿರುವ ಹುದ್ದೆಗಳೊಂದಿಗೆ ಪರಿವರ್ತಿಸಿ ಆದೇಶಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಆದೇಶದಲ್ಲಿ ಕೊಪ್ಪಳ, ಚಿತ್ರದುರ್ಗ, ಕಾರವಾರ, ಚಾಮರಾಜನಗರ ಹಾಗೂ ಬಾಗಲಕೋಟೆ ಜಿಲ್ಲೆಗಳಲ್ಲಿ ಹುದ್ದೆಗಳೊಂದಿಗೆ ವೀಕ್ಷಣಾಲಯಗಳನ್ನು ಪ್ರಾರಂಭಿಸಲು ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ಆದೇಶದಲ್ಲಿ ಬಾಲನ್ಯಾಯ (ಮಕ್ಕಳ ರಕ್ಷಣೆ ಮತ್ತು ಪೋಷಣೆ) ಅಧಿನಿಯಮ, 2000 ರಡಿ ಕೊಡಗು, ಹಾವೇರಿ, ರಾಮನಗರ ಮತ್ತು ಚಿಕ್ಕಬಳ್ಳಾಪುರ ಜಿಲ್ಲೆಗಳಲ್ಲಿ ಹುದ್ದೆಗಳನ್ನೊಳಗೊಂಡಂತೆ ವೀಕ್ಷಣಾಲಯಗಳನ್ನು ಪ್ರಾರಂಭಿಸಲು ಹಾಗೂ ಬಿಜಾಪುರ, ಮಂಗಳೂರು ಮತ್ತು ಶಿವಮೊಗ್ಗ ಜಿಲ್ಲೆಯ ಸ್ವೀಕಾರ ಕೇಂದ್ರಗಳನ್ನು ಕ್ರಮವಾಗಿ ದಾವಣಗೆರೆ, ಹಾಸನ ಮತ್ತು ಗದಗ ಜಿಲ್ಲೆಗಳ ಕಾರ್ಯವ್ಯಾಪ್ತಿಯ–ನ್ನೊಳಗೊಂಡು ವೀಕ್ಷಣಾಲಯಗಳನ್ನಾಗಿ ಪ್ರಾರಂಭಿಸಲು ಮಂಜೂರಾತಿ ನೀಡಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (4) ರಲ್ಲಿ ವೀಕ್ಷಣಾಲಯಗಳಲ್ಲಿ ಕಾನೂನು ಸಂಘರ್ಷಕ್ಕೆ ಒಳಪಟ್ಟ ಮಕ್ಕಳ ಪ್ರಕರಣಗಳ ಬಗ್ಗೆ ಬಾಲನ್ಯಾಯ ಮಂಡಲಿಯು ಬಾಲನ್ಯಾಯ (ಮಕ್ಕಳ ರಕ್ಷಣೆ ಮತ್ತು ಪೋಷಣೆ) ಕಾಯ್ದೆ 2000 ಹಾಗೂ ತಿದ್ದುಪಡಿ 2006 ರ ಸೆಕ್ಷನ್ 15ರ ಮೇರೆಗೆ ವಿಶೇಷ ಗೃಹಗಳಿಗೆ ಮಕ್ಕಳನ್ನು ಕಳುಹಿಸಲು ಹಾಗೂ ವಿಶೇಷ ಗೃಹಗಳನ್ನು ಸ್ಥಾಪಿಸಲು ಕಾಯ್ದೆಯ ಸೆಕ್ಷನ್ 9 ರಡಿ ಅವಕಾಶವಿದ್ದು, ಈ ಮೇರೆಗೆ 2 ವಿಶೇಷ ಗೃಹಗಳನ್ನು ಬಾಲಕಿಯರಿಗಾಗಿ ಹಾಗೂ 2 ವಿಶೇಷ ಗೃಹಗಳನ್ನು ಬಾಲಕರಿಗಾಗಿ ಸ್ಥಾಪಿಸುವ ಬಗ್ಗೆ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ನಿರ್ದೇಶಕರು ಮೇಲೆ ಓದಲಾದ ಏಕ ಕಡತದಲ್ಲಿ ಈ ಕೆಳಕಂಡಂತೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮಕ್ಕಳ ಕಲ್ಯಾಣ ಸಮಿತಿಯ ಮುಂದೆ ಬರುವ ಬಾಲಕಿಯರ (18 ವರ್ಷದೊಳಗಿನ) ಪ್ರಕರಣಗಳಲ್ಲಿ ಪ್ರೌಢಾವಸ್ಥೆಯಲ್ಲಿ ಲೈಂಗಿಕ ಶೋಷಣೆಗೆ/ಅತ್ಯಾಚಾರಕ್ಕೆ ಒಳಗಾದ ಹೆಣ್ಣು ಮಕ್ಕಳೂ ಸಹ ಇದ್ದು ಇಂತಹ ಮಕ್ಕಳಿಗಾಗಿ ಪ್ರತ್ಯೇಕ ಸಂಸ್ಥೆಯ ಅವಶ್ಯಕತೆ ಇರುತ್ತದೆ. ಇಂತಹ ಮಕ್ಕಳ ಮನ: ಸ್ಥಿತಿ ಬಹಳ ಸೂಕ್ಷ್ಮವಾಗಿದ್ದು ಇವರಿಗೆ ತಜ್ಞ ವೈದ್ಯರಿಂದ ವೈದ್ಯಕೀಯ ಸೇವೆ, ಸಲಹೆ, ಮಾನಸಿಕ ತಜ್ಞರಿಂದ ಆಪ್ತ ಸಲಹೆ ಅತಿ ಅವಶ್ಯಕವಾಗಿರುತ್ತದೆ. ಈ ಮಕ್ಕಳನ್ನು ಇತರೆ ಸಾಮಾನ್ಯ ಮಕ್ಕಳೊಂದಿಗೆ ಇರಿಸಲಾಗಿದ್ದು, ಇವರುಗಳು ಸಾಮಾನ್ಯ ಮಕ್ಕಳ ಮನಃಸ್ಥಿತಿ ಮೇಲೆ ಪ್ರಭಾವ ಬೀರುತ್ತಿರುವುದು ಕಂಡು ಬಂದಿದೆ. ಅವರ ದೈನಂದಿನ ಚಟುವಟಿಕೆಗಳಿಗೆ ವಿದ್ಯಾಭ್ಯಾಸಕ್ಕೆ ತೊಂದರೆ ಉಂಟಾಗುವುದನ್ನು ಗಮನಿಸಿ ಹೊಸದಾಗಿ ಬಾಲಮಂದಿರ ಮಂಜೂರು ಮಾಡಲು ಪ್ರಸ್ತಾವನೆ ಸಲ್ಲಿಸಿದ್ದು ಆರ್ಥಿಕ ಇಲಾಖೆಯು ಸದರಿ ಪ್ರಸ್ತಾವನೆಗೆ ಇಲಾಖೆಯ ಯಾವುದಾದರು ಒಂದು ಸಂಸ್ಥೆಯನ್ನು ಪರಿವರ್ತಿಸುವ ಬಗ್ಗೆ ಪರಿಶೀಲಿಸಲು ಸೂಚಿಸಿರುತ್ತದೆ.

ಬಳ್ಳಾರಿ ಜಿಲ್ಲೆಯಲ್ಲಿ 2 ಬಾಲಕರ ಬಾಲಮಂದಿರವಿದ್ದು ಸದರಿ ಜಿಲ್ಲೆಯಲ್ಲಿ ಬಾಲಕಿಯರ ಬಾಲಮಂದಿರ ಇರುವುದಿಲ್ಲ. ಬಾಲಕರ ಬಾಲಮಂದಿರದಲ್ಲಿ ಒಂದನ್ನು ಬಾಲಕಿಯರ ಬಾಲಮಂದಿರವನ್ನಾಗಿ ಪರಿವರ್ತಿಸಬಹುದಾಗಿರುತ್ತದೆ.

ಚಿಕ್ಕಮಗಳೂರು, ಮಂಗಳೂರು, ರಾಮನಗರ, ಚಿಕ್ಕಬಳ್ಳಾಪುರ ಜಿಲ್ಲೆಗಳಲ್ಲಿ ಬಾಲಮಂದಿರಗಳು ಇರುವುದಿಲ್ಲ. ಈ ಜಿಲ್ಲೆಗಳಲ್ಲಿ ಬಾಲಕರ/ಬಾಲಕಿಯರ ಬಾಲಮಂದಿರಗಳನ್ನು ತೆರೆಯಲು ಪ್ರಸ್ತಾವನೆಗಳು ಬಂದಿರುತ್ತವೆ. ಹಾವೇರಿ, ಬಾಗಲಕೋಟೆ, ಜಿಲ್ಲೆಗಳಲ್ಲಿ ಗಂಡು ಮಕ್ಕಳ ಬಾಲಮಂದಿರಗಳು ನಡೆಯುತ್ತಿದ್ದು, ಹೆಣ್ಣು ಮಕ್ಕಳ ಬಾಲಮಂದಿರಗಳನ್ನು ತೆರೆಯಲು ಜಿಲ್ಲಾಧಿಕಾರಿಗಳಿಂದ ಬೇಡಿಕೆ ಬಂದಿರುತ್ತವೆ.

ಹಾಲಿ 8 ವೀಕ್ಷಣಾಲಯಗಳು ನಡೆಯುತ್ತಿದ್ದು, 20 ವೀಕ್ಷಣಾಲಯಗಳಿಗೆ ಮಂಜೂರಾತಿಯು ದೊರೆತಿರುತ್ತದೆ. ವೀಕ್ಷಣಾಲಯಗಳಲ್ಲಿನ ಮಕ್ಕಳ ಸಂಖ್ಯೆಗಳನ್ನು ಪರಿಶೀಲಿಸಿದಾಗ ಹೆಚ್ಚಿನ ಸಂಖ್ಯೆಯಲ್ಲಿ ಮಕ್ಕಳನ್ನು ಜಾಮೀನಿನ ಮೇಲೆ ಬಿಡುಗಡೆ ಮಾಡಿರುತ್ತಾರೆ. ಕೆಲವು ವೀಕ್ಷಣಾಲಯಗಳಲ್ಲಿ ಮಕ್ಕಳು ಇರುವುದಿಲ್ಲ. ಮಕ್ಕಳ ಸಂಖ್ಯೆ ಕಡಿಮೆ ಇರುವ ಕಾರಣ ಸಿಬ್ಬಂದಿ ನಿರ್ವಹಣಾ ವೆಚ್ಚ ಹೆಚ್ಚಾಗುತ್ತದೆ.

ಎಲ್ಲಾ ಜಿಲ್ಲೆಗಳಲ್ಲಿಯೂ ವೀಕ್ಷಣಾಲಯಗಳನ್ನು ಪ್ರಾರಂಭಿಸಲು ಮಂಜೂರಾತಿ ನೀಡಿದ್ದು, ಇಷ್ಟು ಸಂಖ್ಯೆಯ ವೀಕ್ಷಣಾಲಯದ ಅವಶ್ಯಕತೆ ಇಲ್ಲದೆ ಇದ್ದು ಮಂಜೂರಾಗಿರುವ 20 ಜಿಲ್ಲೆಗಳ ವೀಕ್ಷಣಾಲಯಗಳಲ್ಲಿ ಕೆಲವು ವೀಕ್ಷಣಾಲಯಗಳನ್ನು ಬಾಲಮಂದಿರಗಳನ್ನಾಗಿ, ವಿಶೇಷ ಗೃಹಗಳನ್ನಾಗಿ ಹಾಗೂ ಸ್ವೀಕಾರ ಕೇಂದ್ರವನ್ನಾಗಿ ಪರಿವರ್ತಿಸಬಹುದಾಗಿರುತ್ತದೆ.

ಹಾಲಿ ಮಂಜೂರಾಗಿರುವ ವೀಕ್ಷಣಾಲಯಗಳನ್ನು ಅವಶ್ಯಕತೆಗನುಗುಣವಾಗಿ ಬಾಲಮಂದಿರ, ವಿಶೇಷಗೃಹ ಹಾಗೂ ಸ್ವೀಕಾರ ಕೇಂದ್ರವನ್ನಾಗಿ ಮಾರ್ಪಾಡು ಮಾಡಲು ಕ್ರಮ ಕೈಗೊಳ್ಳಲಾಗಿದೆ.

ಬಾಲ ನ್ಯಾಯ ಕಾಯ್ದೆ (ಮಕ್ಕಳ ರಕ್ಷಣೆ ಮತ್ತು ಪೋಷಣೆ) ತಿದ್ದುಪಡಿ 2006ರ ಮೇರೆಗೆ ಪ್ರತಿಯೊಂದು ಜಿಲ್ಲೆಯಲ್ಲಿ ಒಂದು ಅಥವಾ ಹೆಚ್ಚು ಬಾಲ ನ್ಯಾಯ ಮಂಡಳಿಗಳನ್ನು ರಚಿಸಲು ಅವಕಾಶವಿರುತ್ತದೆ. ಅದರಂತೆ ಪ್ರತಿಯೊಂದು ಜಿಲ್ಲೆಯಲ್ಲಿ ಒಂದು ಅಥವಾ ಅವಶ್ಯಕತೆಗೆ ತಕ್ಕಂತೆ ಹೆಚ್ಚಿನ ಬಾಲ ನ್ಯಾಯ ಮಂಡಳಿಗಳನ್ನು ರಚಿಸಲು ಕ್ರಮ ಕೈಗೊಳ್ಳಲಾಗಿರುತ್ತದೆ. ಕೆಲವು ವೀಕ್ಷಣಾಲಯಗಳನ್ನು ಪರಿವರ್ತಿಸಿರುವ ಕಾರಣ ಬಾಲ ನ್ಯಾಯ ಮಂಡಳಿಗಳ ಮುಂದೆ ಬಂದ ಮಕ್ಕಳನ್ನು ಪರಿವೀಕ್ಷಣಾ ಅವಧಿಯಲ್ಲಿ ಇರಿಸಬೇಕಾದ ವೀಕ್ಷಣಾಲಯಗಳ ಜಿಲ್ಲೆಗಳ ವ್ಯಾಪ್ತಿಯನ್ನು ನಿಗದಿಪಡಿಸಿ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

**ಸರ್ಕಾರದ ಆದೇಶ ಸಂಖ್ಯೆ : ಮಮಇ 103 ಮಭಾಬ 2010(2), ಬೆಂಗಳೂರು, ದಿನಾಂಕ : 07.09.2010.**

ಮೇಲಿನ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಬಾಲನ್ಯಾಯ (ಮಕ್ಕಳ ರಕ್ಷಣೆ ಮತ್ತು ಪೋಷಣೆ) ಕಾಯ್ದೆ 2000 ಮತ್ತು ತಿದ್ದುಪಡಿ 2006 ರಡಿ ಕಾರ್ಯನಿರ್ವಹಿಸುತ್ತಿರುವ ವೀಕ್ಷಣಾಲಯಗಳನ್ನು ಅನುಬಂಧ 1 ವಿವರಿಸಿರುವಂತೆ ಬಾಲಮಂದಿರ, ಸ್ವೀಕಾರ ಕೇಂದ್ರ ಹಾಗೂ ವಿಶೇಷಗೃಹಗಳನ್ನಾಗಿಯೂ, ಬಳ್ಳಾರಿ ಕಿರಿಯ ಬಾಲಕರ ಬಾಲಮಂದಿರವನ್ನು ಬಾಲಕಿಯರ ಬಾಲಮಂದಿರವನ್ನಾಗಿ ಹಾಗೂ ಕೆ.ಜಿ.ಎಫ್ ಸ್ವೀಕಾರ ಕೇಂದ್ರವನ್ನು ಪ್ರೌಢಾವಸ್ಥೆಯಲ್ಲಿನ ದೌರ್ಜನ್ಯಕ್ಕೆ ಒಳಗಾದ ಬಾಲಕಿಯರ ಬಾಲಮಂದಿರವನ್ನಾಗಿ ಪರಿವರ್ತಿಸಿ ಮತ್ತು ಅನುಬಂಧ-2 ರಲ್ಲಿರುವಂತೆ ಬಾಲ ನ್ಯಾಯ ಮಂಡಳಿಗಳ ಮುಂದೆ ಬಂದ ಮಕ್ಕಳನ್ನು ಪರಿವೀಕ್ಷಣಾ ಅವಧಿಯಲ್ಲಿ ಇರಿಸಬೇಕಾದ ವೀಕ್ಷಣಾಲಯಗಳ ಕಾರ್ಯವ್ಯಾಪ್ತಿ ಜಿಲ್ಲೆಗಳ ವ್ಯಾಪ್ತಿಯನ್ನು ನಿಗದಿ ಪಡಿಸಿ ಆದೇಶ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ.

**ಎಸ್.ಎನ್.ಕೃಷ್ಣಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ-1

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

## ಅನುಬಂಧ - 1

**ಪರಿವರ್ತಿಸಿರುವ ಸಂಸ್ಥೆಗಳ ವಿವರ**

**ಆದೇಶ ಸಂಖ್ಯೆ: ಮಮಇ 103 ಮಭಾಬ 2010(2), ಬೆಂಗಳೂರು, ದಿನಾಂಕ: 07.09.2010**

| ಕ್ರ.ಸಂ. | ವೀಕ್ಷಣಾಲಯಗಳು | ಪರಿವರ್ತನೆ ಮಾಡಬೇಕಾದ ಸಂಸ್ಥೆ* | ಮಂಜೂರಾತಿ ಸಂಖ್ಯೆ | ವಯೋಮಿತಿ |
|---|---|---|---|---|
| 1 | ಬೆಂಗಳೂರು(ನ) | ವೀಕ್ಷಣಾಲಯ ಹಾಗೂ ವಿಶೇಷ ಗೃಹ (ಬಾಲಕರಿಗೆ) | 100 | ಜೆಜೆ ಕಾಯ್ದೆ ಅನ್ವಯ |
| 2 | ಬೆಂಗಳೂರು(ಗ್ರಾ) | ವೀಕ್ಷಣಾಲಯ ಹಾಗೂ ವಿಶೇಷ ಗೃಹ (ಬಾಲಕಿಯರಿಗೆ) | 25 | ಜೆಜೆ ಕಾಯ್ದೆ ಅನ್ವಯ |
| 3 | ಚಿಕ್ಕಬಳ್ಳಾಪುರ | ಬಾಲಕಿಯರ ಬಾಲ ಮಂದಿರ | 50 | 15 ರಿಂದ 18 |
| 4 | ರಾಮನಗರ, | ಬಾಲಕಿಯರ ಬಾಲ ಮಂದಿರ | 50 | 15 ರಿಂದ 18 |
| 5 | ಬಾಗಲಕೋಟೆ | ಬಾಲಕಿಯರ ಬಾಲ ಮಂದಿರ | 50 | 6 ರಿಂದ 15 |
| 6 | ಬೀದರ್ | ಯಾದಗಿರಿ ಬಾಲಕಿಯರ ಬಾಲಮಂದಿರ | 50 | 15 ರಿಂದ 18 |
| 7 | ಬೆಳಗಾಂ | ವೀಕ್ಷಣಾಲಯ ಹಾಗೂ ವಿಶೇಷ ಗೃಹ (ಬಾಲಕರಿಗೆ) | 25 | ಜೆಜೆ ಕಾಯ್ದೆಯನ್ವಯ |
| 8 | ಕೊಪ್ಪಳ | ಬಾಲಕಿಯರ ಬಾಲ ಮಂದಿರ | 50 | 6 ರಿಂದ 15ರ ವರೆವಿಗೆ |
| 9 | ಹಾವೇರಿ | ಬಾಲಕಿಯರ ಬಾಲ ಮಂದಿರ | 50 | 15 ರಿಂದ 18 |
| 10 | ಮಂಗಳೂರು | ಬಾಲಕರ ಬಾಲ ಮಂದಿರ | 50 | 6 ರಿಂದ 15 |
| 11 | ಚಾಮರಾಜನಗರ | ಬಾಲಕರ ಬಾಲ ಮಂದಿರ | 50 | 6 ರಿಂದ 15 |
| 12 | ಮಂಡ್ಯ | ಬಾಲಕಿಯರ ಬಾಲ ಮಂದಿರ | 50 | 6 ರಿಂದ 15 |
| 13 | ಕೊಡಗು | ಬಾಲಕಿಯರ ಬಾಲ ಮಂದಿರ | 50 | 6 ರಿಂದ 15 |

| | | | | |
|---|---|---|---|---|
| 14 | ದಾಣಗೆರೆ | ವೀಕ್ಷಣಾಲಯ ಹಾಗೂ ವಿಶೇಷ ಗೃಹ (ಬಾಲಕಿಯರಿಗೆ) | 25 | ಜೆಜೆ ಕಾಯ್ದೆಯನ್ವಯ |
| 15 | ಚಿಕ್ಕಮಗಳೂರು | ಬಾಲಕರ ಬಾಲಮಂದಿರ | 50 | 15 ರಿಂದ 18 |
| 16 | ತುಮಕೂರು | ಸ್ವೀಕಾರ ಕೇಂದ್ರ | 40 | ಮಹಿಳೆಯರಿಗೆ |
| 17 | ಕೆಜಿಎಫ್ | ಸ್ವೀಕಾರ ಕೇಂದ್ರವನ್ನು ಪ್ರೌಢಾವಸ್ಥೆಯಲ್ಲಿ ದೌರ್ಜನ್ಯಕ್ಕೆ ಒಳಗಾದ ಬಾಲಕಿಯರಿಗಾಗಿ ಬಾಲಮಂದಿರ | 75 | 18 ವರ್ಷದ ಒಳಗಿನ ಬಾಲಕಿಯರು |

**ಎಸ್.ಎನ್.ಕೃಷ್ಣಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ-1
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

## ಅನುಬಂಧ – 2

**ಆದೇಶ ಸಂಖ್ಯೆ: ಮಮಇ 103 ಮಭಾಬ 2010(2), ಬೆಂಗಳೂರು, ದಿನಾಂಕ: 07.09.2010**

**ಬಾಲ ನ್ಯಾಯ ಮಂಡಲಿಗಳ ಮುಂದೆ ಬಂದ ಮಕ್ಕಳನ್ನು ಪರಿವೀಕ್ಷಣಾ ಅವಧಿಯಲ್ಲಿ ಇರಿಸಬೇಕಾದ ವೀಕ್ಷಣಾಲಯ ಜಿಲ್ಲೆಗಳ ವ್ಯಾಪ್ತಿ**

| ಕ್ರ. ಸಂ. | ವೀಕ್ಷಣಾಲಯಗಳು | ಬಾಲನ್ಯಾಯ ಮಂಡಲಿಗಳ ವ್ಯಾಪ್ತಿ |
|---|---|---|
| 1 | ಬೆಂಗಳೂರು ನಗರ | ಬೆಂಗಳೂರು ನಗರ, ಬೆಂಗಳೂರು (ಗ್ರಾ) ಮತ್ತು ರಾಮನಗರ |
| 2 | ಬೆಂಗಳೂರು (ಗ್ರಾ). | ಬೆಂಗಳೂರು ಹಾಗೂ ಮೈಸೂರು ವಿಭಾಗೀಯ ವ್ಯಾಪ್ತಿಗೆ |
| 3 | ಬಿಜಾಪುರ | ಬಿಜಾಪುರ ಮತ್ತು ಬಾಗಲಕೋಟೆ |
| 4 | ಶಿವಮೊಗ್ಗ | ಶಿವಮೊಗ್ಗ |
| 5 | ಗುಲ್ಬರ್ಗಾ | ಗುಲ್ಬರ್ಗಾ, ಬೀದರ್ ಮತ್ತು ಯಾದಗಿರಿ |
| 6 | ಬೆಳಗಾಂ | ಬೆಳಗಾಂ |
| 7 | ಕಾರವಾರ | ಕಾರವಾರ |
| 8 | ಬಳ್ಳಾರಿ | ಬಳ್ಳಾರಿ |
| 9 | ರಾಯಚೂರು | ರಾಯಚೂರು ಮತ್ತು ಕೊಪ್ಪಳ |
| 10 | ಧಾರವಾಡ | ಧಾರವಾಡ, ಗದಗ ಮತ್ತು ಹಾವೇರಿ |
| 11 | ಉಡುಪಿ | ಉಡುಪಿ ಮತ್ತು ಮಂಗಳೂರು |
| 12 | ಮೈಸೂರು | ಮೈಸೂರು, ಚಾಮರಾಜನಗರ, ಕೊಡಗು ಮತ್ತು ಮಂಡ್ಯ |
| 13 | ಚಿತ್ರದುರ್ಗ | ಚಿತ್ರದುರ್ಗ |
| 14 | ದಾವಣಗೆರೆ | ದಾವಣಗೆರೆ |
| 15 | ಕೆಜಿಎಫ್ | ಕೆಜಿಎಫ್ |
| 16 | ಹಾಸನ | ಹಾಸನ ಮತ್ತು ಚಿಕ್ಕಮಗಳೂರು |

**ಎಸ್.ಎನ್.ಕೃಷ್ಣಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ-1
ಪಿ.ಆರ್. 2394 ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ :** ಬಾಲನ್ಯಾಯ (ಮಕ್ಕಳ ರಕ್ಷಣೆ ಮತ್ತು ಪೋಷಣೆ) ಕಾಯ್ದೆ 2000ರಡಿ ಕಾರ್ಯ ನಿರ್ವಹಿಸುತ್ತಿರುವ ಬಾಲಮಂದಿರಗಳು ಸಮರ್ಥವಾಗಿ ಕಾರ್ಯನಿರ್ವಹಿಸಲು ಅನುಕೂಲವಾಗುವಂತೆ ಬಾಲಮಂದಿರ-ಗಳನ್ನು ಮಕ್ಕಳ ವಯಸ್ಸು ಅನುಸಾರ ವಿಂಗಡಿಸುವ ಬಗ್ಗೆ.

**ಓದಲಾಗಿದೆ :** ದಿನಾಂಕ: 17.05.2010 ರ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ನಿರ್ದೇಶಕರ ಏಕ ಕಡತ ಪ್ರಸ್ತಾವನೆ ಸಂಖ್ಯೆ: ಮಮಅಇ:ಸು.ಶಾ:ಪ-ಅ-2:30:10-11.

**ಪ್ರಸ್ತಾವನೆ :**

ರಾಜ್ಯದಲ್ಲಿ ಬಾಲನ್ಯಾಯ (ಮಕ್ಕಳ ರಕ್ಷಣೆ ಮತ್ತು ಪೋಷಣೆ) ಕಾಯ್ದೆ 2000 ಮತ್ತು ತಿದ್ದುಪಡಿ 2006ರನ್ವಯ 26 ಬಾಲಕರ ಬಾಲಮಂದಿರಗಳು, 17 ಬಾಲಕಿಯರ ಬಾಲಮಂದಿರಗಳು, 01 ಶಿಸು ಮಂದಿರ, 8 ವೀಕ್ಷಣಾಲಯಗಳು, 3 ಪುರುಷರ ಅನುಪಾಲನಾ ಗೃಹಗಳು ಕಾರ್ಯ ನಿರ್ವಹಿಸುತ್ತಿವೆ ಎಂದು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ನಿರ್ದೇಶಕರು ಮೇಲೆ ಓದಲಾದ ಏಕ ಕಡತದಲ್ಲಿ ಈ ಕೆಳಕಂಡಂತೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಬಾಲ ನ್ಯಾಯ (ಮಕ್ಕಳ ರಕ್ಷಣೆ ಮತ್ತು ಪೋಷಣೆ) ಕಾಯ್ದೆ 2000ರಡಿ ಮತ್ತು 2006ರ ಅಡಿ ಬಾಲಮಂದಿರಗಳನ್ನು ಮಕ್ಕಳ ವಯಸ್ಸಿಗೆ ಅನುಸಾರವಾಗಿ ಪ್ರತ್ಯೇಕವಾಗಿ ವ್ಯವಸ್ಥೆ ಮಾಡಲು ತಿಳಿಸಲಾಗಿರುತ್ತದೆ. ಹಾಲಿ ಕಾರ್ಯ ನಿರ್ವಹಿಸುತ್ತಿರುವ ಬಾಲಮಂದಿರಗಳಲ್ಲಿ 6 ರಿಂದ 18 ವಯಸ್ಸಿನ

ಮಕ್ಕಳು ಒಟ್ಟಿಗೆ ಇರುತ್ತಾರೆ. ಇದರಿಂದ ಓದುವ ಮಕ್ಕಳಿಗೆ ದೈನಂದಿನ ಕಾರ್ಯಗಳಲ್ಲಿ ತೊಂದರೆ ಉಂಟಾಗಿರುವುದನ್ನು ದೊಡ್ಡ ಮಕ್ಕಳು ಚಿಕ್ಕ ಮಕ್ಕಳಿಗೆ ಕಿರುಕುಳ ನೀಡುವುದು ಮತ್ತು ಕೆಲವು ಸಂದರ್ಭಗಳಲ್ಲಿ ದೈಹಿಕ ಹಿಂಸೆ ನೀಡುವುದನ್ನು ಕಾಣಿಸಲಾಗಿದೆ. ಚಿಕ್ಕ ಮಕ್ಕಳು ಮತ್ತು ಓದುವ ಮಕ್ಕಳ ಹಿತದೃಷ್ಟಿಯಿಂದ ಬಾಲಮಂದಿರಗಳನ್ನು ವಯಸ್ಸಿಗೆ ಅನುಸಾರವಾಗಿ ವಿಂಗಡಿಸುವುದು ಸೂಕ್ತಕರವಾಗಿರುತ್ತದೆ.

ರಾಜ್ಯ ಮಕ್ಕಳ ಹಕ್ಕುಗಳ ರಕ್ಷಣಾ ಆಯೋಗವು ಸಹ ವಿವಿಧ ಸಂಸ್ಥೆಗಳಿಗೆ ಭೇಟಿ ನೀಡಿ ಚಿಕ್ಕ ಮಕ್ಕಳಿಗೆ ದೊಡ್ಡ ಮಕ್ಕಳಿಂದ ಕಿರುಕುಳ ಉಂಟಾಗಿರುವ ಬಗ್ಗೆಯೂ ತಿಳಿಸಿರುತ್ತಾರೆ. ಕಾಯ್ದೆ ಮತ್ತು ನಿಯಮಗಳಡಿ ಮಕ್ಕಳ ವಯಸ್ಸಿಗೆ ಪ್ರತ್ಯೇಕ ಸಂಸ್ಥೆಗಳಲ್ಲಿ ಇರಿಸಲು ಅವಕಾಶ ಕಲ್ಪಿಸಿದೆ. ಮಕ್ಕಳ ಹಿತದೃಷ್ಟಿಯಿಂದ ಹಾಲಿ ಕಾರ್ಯ ನಿರ್ವಹಿಸುತ್ತಿರುವ ಬಾಲಮಂದಿರಗಳನ್ನು ವಯಸ್ಸಿಗೆ ಅನುಗುಣವಾಗಿ (15 ವರ್ಷದೊಳಗಿನ ಮತ್ತು 15 ವರ್ಷಕ್ಕೆ ಮೇಲ್ಪಟ್ಟ ಮಕ್ಕಳಿಗೆ) ಪ್ರತ್ಯೇಕವಾಗಿ ವಿಂಗಡಿಸಲು ಪ್ರಸ್ತಾಪಿಸಲಾಗಿದೆ. ಇದರಿಂದ ಬಾಲ ನ್ಯಾಯ (ರಕ್ಷಣೆ ಮತ್ತು ಪೋಷಣೆ) ಕಾಯ್ದೆ 2000 ಹಾಗೂ ತಿದ್ದುಪಡಿ 2006 ಹಾಗೂ ಇದರ ನಿಯಮಗಳನ್ವಯ ಪರಿಣಾಮಕಾರಿಯಾಗಿ ಸಂಸ್ಥೆಗಳನ್ನು ನಿರ್ವಹಿಸಲು ಸಹಾಯವಾಗುತ್ತದೆ. ಇದರಿಂದ ಮಕ್ಕಳಿಗೆ ರಕ್ಷಣೆ, ಸೂಕ್ತ ವಾತಾವರಣ, ಸೌಲಭ್ಯಗಳು ದೊರಕಿದಂತಾಗಿ, ಬೆಳವಣಿಗೆಗೆ ಸಹಕಾರಿಯಾಗಿರುವುದರಿಂದ ವಯೋಮಿತಿಗನುಗುಣವಾಗಿ ಬಾಲಕರ/ಬಾಲಕಿಯರ ಬಾಲ ಮಂದಿರಗಳನ್ನು ವಿಂಗಡಿಸಿ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

**ಆದೇಶ ಸಂಖ್ಯೆ: ಮಮಇ 103 ಮಭಾಬ 2010 (1), ಬೆಂಗಳೂರು, ದಿನಾಂಕ: 07.09.2010**

ಮೇಲಿನ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಬಾಲನ್ಯಾಯ (ಮಕ್ಕಳ ರಕ್ಷಣೆ ಮತ್ತು ಪೋಷಣೆ) ಕಾಯ್ದೆ 2000 ರಡಿ ಹಾಲಿ ಕಾರ್ಯನಿರ್ವಹಿಸುತ್ತಿರುವ ಬಾಲಮಂದಿರಗಳು ಸಮರ್ಥವಾಗಿ ಕಾರ್ಯನಿರ್ವಹಿಸಲು ಅನುಬಂಧದಲ್ಲಿರುವಂತೆ ಮಕ್ಕಳ ವಯಸ್ಸಿನ ಅನುಸಾರ ನಿಗದಿಪಡಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಎನ್.ಕೃಷ್ಣಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ–1
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

## ಅನುಬಂಧ

**ಸರ್ಕಾರಿ ಆದೇಶ ಸಂಖ್ಯೆ: ಮಮಇ 103 ಮಭಾಬ 2010 (1), ಬೆಂಗಳೂರು, ದಿನಾಂಕ: 07.09.2010**

**ಬಾಲ ನ್ಯಾಯ (ಮಕ್ಕಳ ರಕ್ಷಣೆ ಮತ್ತು ಪೋಷಣೆ) ಕಾಯ್ದೆ 2000ರಡಿ ಮತ್ತು 2006ರ ನಿಯಮಗಳಡಿ ಮಕ್ಕಳ ವಯಸ್ಸಿಗೆ ಅನುಸಾರವಾಗಿ ಪ್ರತ್ಯೇಕ ಮಾಡಿದ ಸಂಸ್ಥೆಗಳ ವಿವರಗಳು:**

ಅ. ಬಾಲಕರ ಬಾಲಮಂದಿರಗಳ ವಿವರ :

| ಬಾಲಕರ ಬಾಲ ಮಂದಿರ | ವಯೋಮಿತಿ |
|---|---|
| 1. ಬೆಂಗಳೂರು ನಗರ | 15+ ರಿಂದ 18 ವರ್ಷದ ವರೆಗಿನ ಮಕ್ಕಳು |
| 2. ದಾವಣಗೆರೆ | 15+ ರಿಂದ 18 ವರ್ಷದ ವರೆಗಿನ ಮಕ್ಕಳು |
| 3. ಬೆಳಗಾಂ ಹಿರಿಯ | 15+ ರಿಂದ 18 ವರ್ಷದ ವರೆಗಿನ ಮಕ್ಕಳು |
| 4. ಬಿಜಾಪುರ ಹಿರಿಯ | 15+ ರಿಂದ 18 ವರ್ಷದ ವರೆಗಿನ ಮಕ್ಕಳು |
| 5. ಬಳ್ಳಾರಿ ಹಿರಿಯ | 6 ರಿಂದ 18 ವರ್ಷದ ವರೆಗಿನ ಮಕ್ಕಳು (6 ರಿಂದ 15 ಹಾಗೂ 18 ವರ್ಷದ ಮಕ್ಕಳಿಗೆ ಪ್ರತ್ಯೇಕ ಕಟ್ಟಡದ ವ್ಯವಸ್ಥೆ ಮಾಡುವುದು.) |
| 6. ಬೆಂಗಳೂರು ನಗರ ಮನೋವಿಕಲ | 14 ರಿಂದ 18 ವರ್ಷದವರೆಗಿನ ಮಕ್ಕಳು |
| 7. ಬೀದರ್ | 6 ರಿಂದ 15 ವರ್ಷದ ಒಳಗಿನ ಮಕ್ಕಳು |
| 8. ಬಿಜಾಪುರ ಕಿರಿಯ | 6 ರಿಂದ 15 ವರ್ಷದ ಒಳಗಿನ ಮಕ್ಕಳು |
| 9. ಬೆಳಗಾಂ (ಖಾನಾಪುರ) | 6 ರಿಂದ 15 ವರ್ಷದ ಒಳಗಿನ ಮಕ್ಕಳು |
| 10. ಬಳ್ಳಾರಿ (ಮನೋವಿಕಲ) | 6 ರಿಂದ 15 ವರ್ಷದ ಒಳಗಿನ ಮಕ್ಕಳು |
| 11. ಧಾರವಾಡ (ಹುಬ್ಬಳ್ಳಿ) | 6 ರಿಂದ 15 ವರ್ಷದ ಒಳಗಿನ ಮಕ್ಕಳು |
| 12. ರಾಯಚೂರು | 6 ರಿಂದ 15 ವರ್ಷದ ಒಳಗಿನ ಮಕ್ಕಳು |
| 13. ಗದಗ | 6 ರಿಂದ 15 ವರ್ಷದ ಒಳಗಿನ ಮಕ್ಕಳು |
| 14. ಹಾವೇರಿ | 6 ರಿಂದ 15 ವರ್ಷದ ಒಳಗಿನ ಮಕ್ಕಳು |
| 15. ಗುಲ್ಬರ್ಗಾ | 6 ರಿಂದ 15 ವರ್ಷದ ಒಳಗಿನ ಮಕ್ಕಳು |
| 16. ಚಿತ್ರದುರ್ಗ | 6 ರಿಂದ 15 ವರ್ಷದ ಒಳಗಿನ ಮಕ್ಕಳು |
| 17. ಕಾರವಾರ (ಸಿರ್ಸಿ) | 6 ರಿಂದ 15 ವರ್ಷದ ಒಳಗಿನ ಮಕ್ಕಳು |
| 18. ಶಿವಮೊಗ್ಗ | 6 ರಿಂದ 15 ವರ್ಷದ ಒಳಗಿನ ಮಕ್ಕಳು |
| 19. ಕೋಲಾರ | 6 ರಿಂದ 15 ವರ್ಷದ ಒಳಗಿನ ಮಕ್ಕಳು |
| 20. ಮಂಡ್ಯ | 6 ರಿಂದ 15 ವರ್ಷದ ಒಳಗಿನ ಮಕ್ಕಳು |
| 21. ಮೈಸೂರು | 6 ರಿಂದ 15 ವರ್ಷದ ಒಳಗಿನ ಮಕ್ಕಳು |
| 22. ಕೊಡಗು | 6 ರಿಂದ 15 ವರ್ಷದ ಒಳಗಿನ ಮಕ್ಕಳು |

| | |
|---|---|
| 23. ಬಾಗಲಕೋಟೆ | 6 ರಿಂದ 15 ವರ್ಷದ ಒಳಗಿನ ಮಕ್ಕಳು |
| 24. ಕೊಪ್ಪಳ | 6 ರಿಂದ 15 ವರ್ಷದ ಒಳಗಿನ ಮಕ್ಕಳು |
| 25. ಹಾಸನ | 6 ರಿಂದ 15 ವರ್ಷದ ಒಳಗಿನ ಮಕ್ಕಳು |

**ಆ. ಬಾಲಕಿಯರ ಬಾಲಮಂದಿರ :**

| ಬಾಲಕಿಯರ ಬಾಲಮಂದಿರ | ವಯೋಮಿತಿ |
|---|---|
| 1. ಬೀದರ್ | 15 ರಿಂದ 18 ವರ್ಷದ ವರೆಗಿನ ಮಕ್ಕಳು |
| 2. ಬಿಜಾಪುರ | 15 ರಿಂದ 18 ವರ್ಷದ ವರೆಗಿನ ಮಕ್ಕಳು |
| 3. ಬೆಳಗಾಂ (ಸೌದತ್ತಿ) | 15 ರಿಂದ 18 ವರ್ಷದ ವರೆಗಿನ ಮಕ್ಕಳು |
| 4. ರಾಯಚೂರು | 15 ರಿಂದ 18 ವರ್ಷದ ವರೆಗಿನ ಮಕ್ಕಳು |
| 5. ಧಾರವಾಡ (ಹುಬ್ಬಳ್ಳಿ) | 6 ರಿಂದ 15 ವರ್ಷದ ಒಳಗಿನ ಮಕ್ಕಳು |
| 6. ಚಾಮರಾಜನಗರ | 6 ರಿಂದ 15 ವರ್ಷದ ಒಳಗಿನ ಮಕ್ಕಳು |
| 7. ಧಾರವಾಡ (ಮನೋವಿಕಲ) | 6 ರಿಂದ 14 ವರ್ಷದ ಒಳಗಿನ ಮಕ್ಕಳು |
| 8. ಬೆಂಗಳೂರು ನಗರ | 6 ರಿಂದ 15 ವರ್ಷದ ಒಳಗಿನ ಮಕ್ಕಳು |
| 9. ಉಡುಪಿ | 6 ರಿಂದ 15 ವರ್ಷದ ಒಳಗಿನ ಮಕ್ಕಳು |
| 10. ಗುಲ್ಬರ್ಗಾ | 6 ರಿಂದ 15 ವರ್ಷದ ಒಳಗಿನ ಮಕ್ಕಳು |
| 11. ಗುಲ್ಬರ್ಗಾ (ಮನೋವಿಕಲ) | 14 ರಿಂದ 18 ವರ್ಷದ ಒಳಗಿನ ಮಕ್ಕಳು |
| 12. ದಾವಣಗೆರೆ | 6 ರಿಂದ 15 ವರ್ಷದ ಒಳಗಿನ ಮಕ್ಕಳು |
| 13. ಮೈಸೂರು | 6 ರಿಂದ 18 ವರ್ಷದ ವರೆಗಿನ ಮಕ್ಕಳು (6 ರಿಂದ 15 ಹಾಗೂ 15 ರಿಂದ 18 ವರ್ಷದ ಮಕ್ಕಳಿಗೆ ಪ್ರತ್ಯೇಕ ಕಟ್ಟಡದ ವ್ಯವಸ್ಥೆ ಮಾಡುವುದು.) |
| 14. ತುಮಕೂರು | 6 ರಿಂದ 15 ವರ್ಷದ ಒಳಗಿನ ಮಕ್ಕಳು |
| 15. ಹಾಸನ | 6 ರಿಂದ 15 ವರ್ಷದ ಒಳಗಿನ ಮಕ್ಕಳು |
| 16. ಗದಗ | 6 ರಿಂದ 15 ವರ್ಷದ ಒಳಗಿನ ಮಕ್ಕಳು |
| 17. ಕಾರವಾರ | 6 ರಿಂದ 15 ವರ್ಷದ ಒಳಗಿನ ಮಕ್ಕಳು |
| 18. ಬಳ್ಳಾರಿ | 6 ರಿಂದ 15 ವರ್ಷದ ಒಳಗಿನ ಮಕ್ಕಳು (ಬಳ್ಳಾರಿ ಕಿರಿಯ ಬಾಲಕರ ಬಾಲ ಮಂದಿರವನ್ನು ಬಾಲಕಿಯರ ಬಾಲಮಂದಿರವಾಗಿ ಪರಿವರ್ತಿಸಿದೆ) |

**ಎಸ್.ಎನ್.ಕೃಷ್ಣಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ–1
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

ಪಿ.ಆರ್. 2395

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ :** ಶ್ರೀ ಬಾಲಕೃಷ್ಣ ವಿ. ಮಸಲಿ, ಸದಸ್ಯರು, ಮಕ್ಕಳ ಕಲ್ಯಾಣ ಸಮಿತಿ–2 ಬೆಂಗಳೂರು ನಗರ ಇವರು ಕಾರ್ಯನಿರ್ವಹಿಸದಂತೆ ಪ್ರತಿಬಂಧ ವಿಧಿಸುವ ಕುರಿತು ಆದೇಶ.

**ಓದಲಾಗಿದೆ :**
1. ಅಧಿಸೂಚನೆ ಸಂಖ್ಯೆ: ಮಮಇ/03/ಮಭಾಬ/2007 ದಿ: 26.02.2007
2. ಕರ್ನಾಟಕ ರಾಜ್ಯ ಮಕ್ಕಳ ಹಕ್ಕುಗಳ ರಕ್ಷಣಾ ಆಯೋಗದ ಮಧ್ಯಂತರ ಆದೇಶದ ಫ್ಯಾಕ್ಸ್ ಸಂದೇಶ ದಿ: 07–09–10
3. ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರ ಪತ್ರ ಸಂಖ್ಯೆ: ಮಮಅ/ಸುಶಾ/ಪಅ–2/33/09–10, ದಿನಾಂಕ: 07.09.10

**ಪ್ರಸ್ತಾವನೆ :**

ಮೇಲೆ ಕ್ರಮಾಂಕ (1) ರಲ್ಲಿ ಓದಲಾದ ಅಧಿಸೂಚನೆಯಲ್ಲಿ ಶ್ರೀ ಬಾಲಕೃಷ್ಣ ವಿ. ಮಸಲಿ ಇವರನ್ನು ಮಕ್ಕಳ ಕಲ್ಯಾಣ ಸಮಿತಿ–2, ಬೆಂಗಳೂರು ನಗರ ಜಿಲ್ಲೆ ಇಲ್ಲಿಗೆ ಸದಸ್ಯರನ್ನಾಗಿ ನೇಮಕ ಮಾಡಲಾಗಿದೆ.

ಮೇಲೆ ಕ್ರಮಾಂಕ (2)ರಲ್ಲಿ ಓದಲಾದ ಕರ್ನಾಟಕ ರಾಜ್ಯ ಮಕ್ಕಳ ರಕ್ಷಣಾ ಆಯೋಗದ ಮಧ್ಯಂತರ ಆದೇಶದ ಫ್ಯಾಕ್ಸ್ ಸಂದೇಶದಲ್ಲಿ ದೂರು ಸಂಖ್ಯೆ: ಕೆ.ಎಸ್.ಸಿ.ಟಿ. ಸಿ.ಆರ್–128/2010–11 ರ ಪ್ರಕರಣದ ಬಗ್ಗೆ ಈ ರೀತಿ ಆದೇಶ ನೀಡಿರುತ್ತದೆ.

It is apparent that Mr. Masli has taken advantage of his position and used the opportunity to sexually molest the minor girls in the privacy of the cubicle. This is a total breach of the fiduciary relationship that is expected between the children and the CWC members under the Act. It is also gross misue of power by Mr. Masli. Thus section 23 of JJA is attached.

(i) The Secretary, Department of Women and Child Development is hereby directed to suspend Mr. Balakrishna Masli from holding sittings as a Member of the Child Welfare Committee II, Bangalore Urban District with immediate effect.

(ii) The Department of Women and Child Development is hereby also directed to conduct an inquiry as per provisions in Rule no.7(9) and Rule no.60 of KJJR 2007 and to file and FIR against Mr. Masli under Section 23 of JJA 2000 and relevant sections of the IPC (1860) Sec, 354 and Sec.376).

ಮೇಲೆ ಕ್ರಮಾಂಕ (3) ರಲ್ಲಿ ದಿನಾಂಕ: 06–09–10ರ ದೂರವಾಣಿ ಕೆರೆ ಶ್ರೀಮತಿ ನೀನಾ ಪಿ. ನಾಯಕ್, ಅಧ್ಯಕ್ಷರು, ಕರ್ನಾಟಕ ರಾಜ್ಯ ಮಕ್ಕಳ ಹಕ್ಕುಗಳ ರಕ್ಷಣಾ ಆಯೋಗದ ಮೇರೆಗೆ ಉಪ ನಿರ್ದೇಶಕರು (ಸುಧಾರಣೆ) ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು ಇವರು ಜಂಟಿ ಭೇಟಿ ನೀಡಿ ಬಾಲಕಿಯರ ಬಾಲಮಂದಿರದಲ್ಲಿ ಘಟನೆ ನಡೆದಿದೆ ಎನ್ನಲಾದ ಹೆಣ್ಣು ಮಕ್ಕಳನ್ನು ವಿಚಾರಿಸಲಾಗಿರುತ್ತದೆ. ವಿಚಾರಣೆ ಸಮಯದಲ್ಲಿ ಬಾಲಕಿಯರು ನೀಡಿದ ಹೇಳಿಕೆಯನ್ನು ಶ್ರೀಮತಿ ನೀನಾ ಪಿ. ನಾಯಕ್ ಅಧ್ಯಕ್ಷರು ಇವರು ಧ್ವನಿ ಮುದ್ರಿಸಿಕೊಂಡಿರುತ್ತಾರೆ. ವಿಚಾರಣೆ ಸಮಯದಲ್ಲಿ ಬಾಲಕಿಯರು ತಿಳಿಸಿದ ವಿಷಯವನ್ನು ಪರಿಶೀಲಿಸಲಾಗಿ ಶ್ರೀ ಬಾಲಕೃಷ್ಣ ವಿ. ಮಸಲಿ ಇವರು ಹೆಣ್ಣು ಮಕ್ಕಳೊಂದಿಗೆ ಅಸಭ್ಯವಾಗಿ ವರ್ತಿಸಿರುವುದು ತಿಳಿದು ಬರುತ್ತದೆ. ಸದರಿಯವರು ಹೆಣ್ಣು ಮಕ್ಕಳೊಂದಿಗೆ ಅಸಭ್ಯವಾಗಿ ವರ್ತಿಸಿರುವ ಕಾರಣ ಇವರನ್ನು ಸಮಿತಿಯಲ್ಲಿ ಮುಂದುವರೆಸುವುದು ಮಕ್ಕಳ ಭವಿಷ್ಯದ ಹಿತದೃಷ್ಟಿಯಿಂದ ಸರಿ ಇರುವುದಿಲ್ಲ. ಆದ್ದರಿಂದ ಇವರು ಕರ್ತವ್ಯ ನಿರ್ವಹಿಸುವುದನ್ನು ಪ್ರತಿಬಂಧಿಸಲು ಕ್ರಮ ಕೈಗೊಳ್ಳಲು ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರು ಕೋರಿರುತ್ತಾರೆ.

**ಸರ್ಕಾರಿ ಆದೇಶ ಸಂಖ್ಯೆ: ಮಮಇ/189/ಮಭಾಬ/2010, ಬೆಂಗಳೂರು ದಿನಾಂಕ: 07.09.10**

ಮೇಲಿನ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಮಕ್ಕಳ ಪಾಲನೆ ಮತ್ತು ಪೋಷಣೆಯನ್ನು ಗಮನದಲ್ಲಿರಿಸಿಕೊಂಡು ಬಾಲನ್ಯಾಯ (ಮಕ್ಕಳ ರಕ್ಷಣೆ ಮತ್ತು ಪೋಷಣೆ) ಅಧಿನಿಯಮ 2000ರ ಪ್ರಕರಣ 29(4) (i) ಮತ್ತು ನಿಯಮ 22(3) (ii) ರನ್ವಯ ಶ್ರೀ ಬಾಲಕೃಷ್ಣ ವಿ. ಮಸಲಿ ಇವರ ಸದಸ್ಯತ್ವವನ್ನು ರದ್ದುಗೊಳಿಸುವುದನ್ನು ಬಾಕಿ ಇರಿಸಿ ಮಕ್ಕಳ ಕಲ್ಯಾಣ ಸಮಿತಿಯ ಸದಸ್ಯರಾಗಿ ಕಾರ್ಯನಿರ್ವಹಿಸುವುದನ್ನು ಪ್ರತಿಬಂಧಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಎನ್.ಕೃಷ್ಣಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ–1
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

ಪಿ.ಆರ್. 2396

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಬೆಳಗಾವಿ ಜಿಲ್ಲೆ ಅಥಣಿ ತಾಲ್ಲೂಕಿನ ತಂಗಡಿ ಸಿನಾಳ ಗ್ರಾಮದ ಹತ್ತಿರ ಅಗ್ರಾಣಿ ಹಳ್ಳಕ್ಕೆ ಅಡ್ಡಲಾಗಿ ಬಂದಾರ ನಿರ್ಮಾಣ ಕಾಮಗಾರಿಯ ಟೆಂಡರನ್ನು ಅನುಮೋದಿಸುವ ಬಗ್ಗೆ.

**ಓದಲಾಗಿದೆ :** 1. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಸಂಖ್ಯೆ: ಮುಇಂ/ಸನೀ(ಉ)ವಲಯ/ಬಿಜೆಪಿ/ಎ.ಇ–1/2010–11/3521 ದಿನಾಂಕ: 19.06.2010.

2. ಸರ್ಕಾರದ ಆದೇಶ ಸಂಖ್ಯೆ: ಸನೀಇ 15 ಮಸಾವಿ 2009, ದಿನಾಂಕ: 20.02.2009

3. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವಾರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ರವರ ದಿನಾಂಕ 28.08.2010 ಪತ್ರ ಸಂಖ್ಯೆ: ಮುಸದ/ಆಪ್ತಶಾಖೆ/ ಟೆಂಡರ್/ 09–10/1920.

**ಪ್ರಸ್ತಾವನೆ :**

ಬೆಳಗಾವಿ ಜಿಲ್ಲೆ ಅಥಣಿ ತಾಲ್ಲೂಕಿನ ತಂಗಡಿ ಸಿನಾಳ ಗ್ರಾಮದ ಹತ್ತಿರ ಅಗ್ರಾಣಿ ಹಳ್ಳಕ್ಕೆ ಅಡ್ಡಲಾಗಿ ಬಂದಾರ ನಿರ್ಮಾಣ ಕಾಮಗಾರಿಯ ರೂ. 60.00 ಲಕ್ಷ ರೂ.ಗಳ ಅಂದಾಜು ಪಟ್ಟಿಗೆ ಮೇಲೆ (2)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರು ನೋಂದಣಿ ಸಂಖ್ಯೆ 110/2009–10ರಡಿ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬೆಳಗಾವಿ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಜಿಲ್ಲಾ ಟೆಂಡರ್ ಬುಲೆಟಿನ್ | 01.03.2010 |
| ಸಂಯುಕ್ತ ಕರ್ನಾಟಕ ದಿನಪತ್ರಿಕೆ | 05.03.2010 |
| ಡೆಕ್ಕನ್ ಹೆರಾಲ್ಡ್ ಆಂಗ್ಲ ದಿನಪತ್ರಿಕೆ | 04.03.2010 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಇಬ್ಬರು ಗುತ್ತಿಗೆದಾರರು ಟೆಂಡರ್‌ನಲ್ಲಿ ಭಾವಗಹಿಸಿರುವುದಾಗಿ ವರದಿಯಾಗಿದೆ. ಸದರಿ ಗುತ್ತಿಗೆದಾರರ ಟೆಂಡರ್‌ನ್ನು ದಿನಾಂಕ: 15.03.2010 ರಂದು ತೆರದು ಪರಿಶೀಲಿಸಲಾಗಿದ್ದು ಈ ಪೈಕಿ ಒಬ್ಬರು ಗುತ್ತಿಗೆದಾರರು ಅರ್ಹರಾಗಿದ್ದು ಸದರಿಯವರ ಟೆಂಡರ್‌ನ ವಿವರಗಳು ಕೆಳಕಂಡಂತಿವೆ.

| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | ರೂ. 51,51, 136/– | |
|---|---|---|---|---|
| ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದ ಟೆಂಡರಿಗೆ ಇಡಲಾದ ಮೊತ್ತ | | | ರೂ. 49,77, 982/– | |
| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ<br>ಶ್ರೀ / ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಪ್ರಸಕ್ತ ಸಾಲಿಗೆ ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| 1 | ಶ್ರೀ, ಹೆಚ್.ಬಿ.ದಳವಾಯಿ<br>ಒಂದನೇ ದರ್ಜೆ ಗುತ್ತಿಗೆದಾರರು. | 57,43,500/– | 11.50 ಹೆಚ್ಚು | 15.38 ಹೆಚ್ಚು |

ಮೇಲ್ಕಂಡಂತೆ ಶ್ರೀ, ಹೆಚ್.ಬಿ.ದಳವಾಯಿ, 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 15.38ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಸಂದಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ: 24/07/2010 ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕುಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 49,77,982/–ಗಳ ಮೇಲೆ ಶೇಕಡ 12.50ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.56,00,230/–ಗಳಿಗೆ ಕಾಮಗಾರಿಯನ್ನು ಶ್ರೀ, ಹೆಚ್.ಬಿ.ದಳವಾಯಿ, 1ನೇ ದರ್ಜೆ ಗುತ್ತಿಗೆದಾರರಿಗೆ ವಹಿಸುವಂತೆ ಶಿಫಾರಸ್ಸು ಮಾಡಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಮೇಲೆ 3ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 37 ಏನೀಯೋ 2010, ಬೆಂಗಳೂರು, ದಿನಾಂಕ : 08ನೇ ಸೆಪ್ಟೆಂಬರ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೆಳಗಾವಿ ಜಿಲ್ಲೆ ಅಥಣಿ ತಾಲ್ಲೂಕಿನ ತಂಗಡಿ ಸಿನಾಳ ಗ್ರಾಮದ ಹತ್ತಿರ ಅಗ್ರಾಣಿ ಹಳ್ಳಕ್ಕೆ ಅಡ್ಡಲಾಗಿ ಬಂದಾರ ನಿರ್ಮಾಣ ಕಾಮಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ 49,77,982/–ಗಳ ಮೇಲೆ ಶೇಕಡ 12.50ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.56,00,230/–ಗಳಿಗೆ(ಐವತ್ತಾರು ಲಕ್ಷದ ಎರಡು ನೂರ ಮೂವತ್ತು ರೂ.ಗಳು ಮಾತ್ರ) ಶ್ರೀ, ಹೆಚ್.ಬಿ.ದಳವಾಯಿ, 1ನೇ ದರ್ಜೆ ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1) ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2) ಸರ್ಕಾರದ ಅನುಮತಿ ಪಡಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3) ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ರುದ್ರಮೂರ್ತಿ**
ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 2397

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಬೆಳಗಾವಿ ಜಿಲ್ಲೆ ಗೋಕಾಕ ತಾಲ್ಲೂಕಿನ ತಳಕಟ್ನಾಳ ಹತ್ತಿರ ಏತ ನೀರಾವರಿ ಯೋಜನೆ ನಿರ್ಮಾಣ ಕಾಮಗಾರಿಯ ಟೆಂಡರ್ ಅನುಮೋದನೆ ಕುರಿತು.

**ಓದಲಾಗಿದೆ :** 1. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಸಂಖ್ಯೆ: ಮುಇಂ/ ಸನೀ(ಉ)ವಲಯ/ಬಿಜೆಪಿ/ಎ.ಇ–1/2010–11/3879 ದಿನಾಂಕ: 07.07.2010.
2. ಸರ್ಕಾರ ಆದೇಶ ಸಂಖ್ಯೆ: ಸನೀಇ 228 ಮಸಾವಿ 2009, ದಿನಾಂಕ: 29.12.2009
3. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವಾರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ರವರ ದಿನಾಂಕ 28.08.2010 ಪತ್ರ ಸಂಖ್ಯೆ: ಮುಸದ/ ಆಪ್ತಶಾಖೆ/ ಟೆಂಡರ್/ 09–10/1920.

**ಪ್ರಸ್ತಾವನೆ :**

ಬೆಳಗಾವಿ ಜಿಲ್ಲೆ ಗೋಕಾಕ ತಾಲ್ಲೂಕಿನ ತಳಕಟ್ನಾಳ ಹತ್ತಿರ ಏತ ನೀರಾವರಿ ಯೋಜನೆ ನಿರ್ಮಾಣ ಕಾಮಗಾರಿಯ ರೂ. 40.00 ಲಕ್ಷಗಳ ಅಂದಾಜು ಪಟ್ಟಿಗೆ ಮೇಲೆ (2)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರು ನೋಂದಣಿ ಸಂಖ್ಯೆ 283/2009–10ರಡಿ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಕರೆಯಲಾದ ಮೊದಲೆರಡು ಟೆಂಡರ್ ಕರೆಗೆ ಯಾವುದೇ ಪ್ರತಿಕ್ರಿಯೆ ಸ್ವೀಕೃತವಾಗಿರುವುದಿಲ್ಲಾ. ನಂತರ ಮೂರನೇ ಬಾರಿಗೆ ಬೆಳಗಾವಿ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ-ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಜಿಲ್ಲಾ ಟೆಂಡರ್ ಬುಲೆಟಿನ್ | 19.04.2010 |
| ಸಂಯುಕ್ತ ಕರ್ನಾಟಕ ಹಾಗೂ ವಿಜಯ ಕರ್ನಾಟಕ ದಿನಪತ್ರಿಕೆ | 20.04.2010 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಇಬ್ಬರು ಗುತ್ತಿಗೆದಾರರು ಟೆಂಡರ್‌ನಲ್ಲಿ ಭಾವಗಹಿಸಿರುವುದಾಗಿ ವರದಿಯಾಗಿದೆ. ಸದರಿ ಗುತ್ತಿಗೆದಾರರ ಟೆಂಡರ್‌ನ್ನು ದಿನಾಂಕ: 15.05.2010 ರಂದು ತೆರದು ಪರಿಶೀಲಿಸಲಾಗಿದ್ದು ಈ ಪೈಕಿ ಒಬ್ಬರು ಗುತ್ತಿಗೆದಾರರು ಅರ್ಹರಾಗಿದ್ದು ಸದರಿಯವರ ಟೆಂಡರ್‌ನ ವಿವರಗಳು ಕೆಳಕಂಡಂತಿವೆ.

| **ಮಂಜೂರಾದ ಅಂದಾಜಿನ ದರಗಳಂತೆ ಹಾಗೂ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ** | | | **ರೂ. 34,66,218/-** |
|---|---|---|---|
| **ಕ್ರಮ ಸಂಖ್ಯೆ** | **ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ / ಮೆಸರ್ಸ್** | **ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ** | **ಮಂಜೂರಾದ ಅಂದಾಜಿನ ದರಗಳ ಹಾಗೂ ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ** |
| 1 | ಹಣಮಂತ ಆರ್ ಚಿಂಚಲಿ ಪ್ರಥಮ ದರ್ಜೆ ಗುತ್ತಿಗೆದಾರರು. | 37,69,950/- | 8.76 ಹೆಚ್ಚು |

ಮೇಲ್ಕಂಡಂತೆ ಶ್ರೀ, ಹಣಮಂತ ಆರ್ ಚಿಂಚಲಿ, 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 8.76ರಷ್ಟು ಹೆಚ್ಚಾಗಿದ್ದು, ಈ ಮೊತ್ತಕ್ಕೆ ಸದರಿಯವರ ಟೆಂಡರ್‌ನ್ನು ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಸಂದಾನದ ಮೂಲಕ ಅಂಗೀಕರಿಸಲು ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ: 24/07/2010 ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರು ಸಲ್ಲಿಸಿದ್ದ ದಿನಾಂಕ: 24.07.10ರ ಪತ್ರವನ್ನು ಪರಿಶೀಲಿಸಿ ಪರಿಷ್ಕೃತ ಟೆಂಡರಿಗಿಡಲಾದ ಮೊತ್ತ ರೂ. 34,66,218/-ಗಳ ಮೇಲೆ ಶೇಕಡ 8.76ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.37,69,950/-ಗಳಿಗೆ ಕಾಮಗಾರಿಯನ್ನು ಶ್ರೀ ಹಣಮಂತ ಆರ್ ಚಿಂಚಲಿ, 1ನೇ ದರ್ಜೆ ಗುತ್ತಿಗೆದಾರರಿಗೆ ವಹಿಸುವಂತೆ ಶಿಫಾರಸ್ಸು ಮಾಡಲು ಸಭೆಯಲ್ಲಿ ತೀರ್ಮಾನಿಸಿ ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 3ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 35 ಏನೀಯೋ 2010, ಬೆಂಗಳೂರು, ದಿನಾಂಕ : 08ನೇ ಸೆಪ್ಟೆಂಬರ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೆಳಗಾವಿ ಜಿಲ್ಲೆ ಗೋಕಾಕ ತಾಲ್ಲೂಕಿನ ತಳಕಟ್ನಾಳ ಹತ್ತಿರ ಏತ ನೀರಾವರಿ ಯೋಜನೆ ನಿರ್ಮಾಣ ಕಾಮಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ 34,66,218/-ಗಳ ಮೇಲೆ ಶೇಕಡ 8.76ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.37,69,950/-ಗಳಿಗೆ(ಮೂವತ್ತೇಳು ಲಕ್ಷದ ಅರವತ್ತೊಂಬತ್ತು ಸಾವಿರದ ಒಂಬತ್ತು ನೂರ ಐವತ್ತು ರೂ.ಗಳು ಮಾತ್ರ) ಶ್ರೀ ಹಣಮಂತ ಆರ್ ಚಿಂಚಲಿ, 1ನೇ ದರ್ಜೆ ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20/01/2003ರಲ್ಲಿ ಇಲಾಖಾ ಕಾರ್ಯದರ್ಶಿ-ಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 2398

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ಶ್ರೀ ಭೀಮಾಶಂಕರ ಸಹಕಾರಿ ಸಕ್ಕರೆ ಕಾರ್ಖಾನೆ ಭೂ ಸ್ವಾಧೀನವಾಗಿರುವ ಜಮೀನಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರ ನೀಡುವ ಬಗ್ಗೆ.

**ಓದಲಾಗಿದೆ :** ದಿನಾಂಕ: 26.7.2010 ಡಿಎಸ್‌ಕೆ/ಎಫ್‌ಐಎನ್/462/2009–10ನೇ ಸಂಖ್ಯೆಯ ಕಬ್ಬು ಅಭಿವೃದ್ಧಿ ಆಯುಕ್ತರು ಹಾಗೂ ಸಕ್ಕರೆ ನಿರ್ದೇಶಕರ ಪತ್ರ.

**ಪ್ರಸ್ತಾವನೆ :**

ಶ್ರೀ ಭೀಮಾಶಂಕರ ಸಹಕಾರಿ ಸಕ್ಕರೆ ಕಾರ್ಖಾನೆ ಸ್ವಾಧೀನ ಪಡಿಸಿಕೊಂಡಿರುವ ಜಮೀನಿಗೆ ಹೆಚ್ಚುವರಿ ಪರಿಹಾರ ನೀಡುವ ವಿಷಯಕ್ಕೆ ಸಂಬಂಧಿಸಿದಂತೆ ಭೂಮಾಲೀಕರು ದಾಖಲಿಸಿದ್ದ ಪ್ರಕರಣ ಸಂಖ್ಯೆ ಎಲ್‌ಎಸಿ ಸಂಖ್ಯೆ 129/2000 ಮತ್ತು 130/2000ದ ಪ್ರಕರಣಗಳಲ್ಲಿ ಗೌರವಾನ್ವಿತ ಸಿವಿಲ್ ನ್ಯಾಯಾಲಯವು ದಿನಾಂಕ: 16.4.2003ರಂದು Rs. 36,04,707.00 ಗಳನ್ನು ಭೂಮಾಲೀಕರಿಗೆ ಪರಿಹಾರ ಮೊತ್ತವಾಗಿ ನೀಡುವಂತೆ ಆದೇಶಿಸಿರುತ್ತದೆ. ಈ ಆದೇಶದ ಬಗ್ಗೆ ಗೌರವಾನ್ವಿತ ಉಚ್ಚನ್ಯಾಯಾಲಯದ ಗುಲ್ಬರ್ಗಾ ಸಂಚಾರಿ ಪೀಠವು ದಿನಾಂಕ: 13.7.2010 ರಂದು ಆದೇಶವನ್ನು ನೀಡಿ ಸಿವಿಲ್ ನ್ಯಾಯಾಲಯವು ಮೇಲ್ಕಂಡ ಎಲ್‌ಎಸಿ ಪ್ರಕರಣಗಳಲ್ಲಿ ನೀಡಿರುವ ಆದೇಶದಂತೆ ಭೂಮಾಲೀಕರಿಗೆ ಪಾವತಿಸಬೇಕಾಗಿರುವ ಪರಿಹಾರದ ಮೊತ್ತವನ್ನು 2 ವಾರಗಳ ಒಳಗಾಗಿ ನ್ಯಾಯಾಲಯದಲ್ಲಿ ಠೇವಣಿಯಿರಿಸುವಂತೆ ನಿರ್ದೇಶಿಸಿರುತ್ತದೆ.

ಈ ಹಿನ್ನೆಲೆಯಲ್ಲಿ ಕಬ್ಬು ಅಭಿವೃದ್ಧಿ ಆಯುಕ್ತರು ದಿನಾಂಕ: 26.7.2010 ರಂದು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸುತ್ತಾ, ಶ್ರೀ ಭೀಮಾಶಂಕರ ಸಹಕಾರಿ ಸಕ್ಕರೆ ಕಾರ್ಖಾನೆಯ ಪ್ರಸ್ತುತ ಸಮಾಪನೆಯಾಗಿರುವುದರಿಂದ ನ್ಯಾಯಾಲಯದ ಆದೇಶದಂತೆ Rs. 36,04,707.00ಗಳ ಪರಿಹಾರ ಮೊತ್ತವನ್ನೂ ಪಾವತಿಸಲು ಕಾರ್ಖಾನೆಯಲ್ಲಿ ಯಾವುದೇ ಸಂಪನ್ಮೂಲಗಳು ಲಭ್ಯವಿಲ್ಲದಿರುವುದಿಲ್ಲವೆಂದೂ ಹಾಗೂ ಕಾರ್ಖಾನೆಯು ಪುನಃಶ್ಚೇತನಗೊಂಡಲ್ಲಿ ಕಾರ್ಖಾನೆಗೆ ಜಮೀನಿನ ಅವಶ್ಯಕತೆಯಿದೆಯೆಂದೂ ತಿಳಿಸುತ್ತಾ, ನ್ಯಾಯಾಲಯದ ಆದೇಶದಂತೆ 2 ವಾರಗಳ ಒಳಗಾಗಿ ಈ ಮೊತ್ತವನ್ನು ನ್ಯಾಯಾಲಯಕ್ಕೆ ಪಾವತಿಸಬೇಕಾಗಿರುವುದರಿಂದ ಈ ಮೊತ್ತವನ್ನು ಕಾರ್ಖಾನೆಗೆ ಮೃದು ಸಾಲವಾಗಿ ಮಂಜೂರು ಮಾಡುವಂತೆ ಕೋರಿರುತ್ತಾರೆ. ಈ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ : ವಾಕೈ 76 ಸಸಕಾ 2010, ಬೆಂಗಳೂರು, ದಿನಾಂಕ : 14.09.2010**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಶ್ರೀ ಭೀಮಾಶಂಕರ ಸಹಕಾರಿ ಸಕ್ಕರೆ ಕಾರ್ಖಾನೆಯು ಸ್ವಾಧೀನಪಡಿಸಿಕೊಂಡಿರುವ ಜಮೀನಿಗೆ ಸಂಬಂಧಿಸಿದಂತೆ ಭೂಮಾಲೀಕರಿಗೆ ಪಾವತಿಸಬೇಕಾಗಿರುವ ಹೆಚ್ಚುವರಿ ಪರಿಹಾರದ ಮೊತ್ತವನ್ನು ನ್ಯಾಯಾಲಯದ ನಿರ್ದೇಶನದಂತೆ ನ್ಯಾಯಾಲಯದಲ್ಲಿ ಠೇವಣಿ ಇರಿಸುವ ಸಲುವಾಗಿ Rs. 36,04,707.00 ಗಳನ್ನು (ಮೂವತ್ತಾರು ಲಕ್ಷ ನಾಲ್ಕು ಸಾವಿರದ ಏಳುನೂರ ಏಳು ರೂಪಾಯಿಗಳು ಮಾತ್ರ) ಶ್ರೀ ಭೀಮಾಶಂಕರ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತಕ್ಕೆ ಮಂಜೂರು ಮಾಡಿ ಬಿಡುಗಡೆ ಮಾಡಲು ಸರ್ಕಾರವು ಆದೇಶಿಸಿದೆ.

ಈ ಮೊತ್ತವನ್ನು ಮೊದಲಿಗೆ ಸಾದಿಲ್ವಾರು ನಿಧಿ ಲೆಕ್ಕ ಶೀರ್ಷಿಕೆ "8000–00–660–0–00–ಸಹಕಾರಕ್ಕೆ ಸಾಲ" ಇದರಡಿಯಲ್ಲಿ ಬಿಡುಗಡೆ ಮಾಡಿ, ನಂತರ ಲೆಕ್ಕ ಶೀರ್ಷಿಕೆ "6860–04–101–0–28–394 ಭೀಮಾಶಂಕರ ಸಹಕಾರ ಸಕ್ಕರೆ ಕಾರ್ಖಾನೆಗೆ ಸಾಲ" ಇದರಡಿಯಲ್ಲಿ ಪೂರಕ ಅಂದಾಜುಗಳ ಮುಂದಿನ ಕಂತಿನಲ್ಲಿ (SE-II 2010-11) ಮರು ತುಂಬಲಾಗುವುದು. ಆರ್ಥಿಕ ಇಲಾಖೆಯು ಈ ಮೊಬಲಗನ್ನು ಸಾದಿಲ್ವಾರು ನಿಧಿಯಿಂದ ಬಿಡುಗಡೆ ಮಾಡಿ ಪ್ರತ್ಯೇಕ ಆದೇಶವನ್ನು ಹೊರಡಿಸುವುದು. ಆರ್ಥಿಕ ಇಲಾಖೆಯ ಪ್ರತ್ಯೇಕ ಆದೇಶವಿಲ್ಲದೆ ಈ ಆದೇಶದ ಮೇರೆಗೆ ಹಣವನ್ನು ಪಡೆಯುವಂತಿಲ್ಲ. ಹಣ ಪಡೆಯುವ ಅಧಿಕಾರಿಯು ಸಾದಿಲ್ವಾರು ನಿಧಿಯಿಂದ ಹಣವನ್ನು ಪಡೆಯಲು ಬಿಲ್ಲನ್ನು ಖಜಾನೆಗೆ ಸಲ್ಲಿಸಿದಾಗ ಆರ್ಥಿಕ ಇಲಾಖೆಯ ಪ್ರತ್ಯೇಕ ಆದೇಶವನ್ನು ಲಗತ್ತಿಸಿದ ನಂತರವೇ ಖಜಾನೆಯು ಹಣವನ್ನು ಬಿಡುಗಡೆ ಮಾಡತಕ್ಕದ್ದು.

ಕಬ್ಬು ಅಭಿವೃದ್ಧಿ ಆಯುಕ್ತರು ಮತ್ತು ಸಕ್ಕರೆ ನಿರ್ದೇಶಕರ ಕಛೇರಿಯ ಸಹಕಾರ ಸಂಘಗಳ ಲೆಕ್ಕ ಪರಿಶೋಧನಾ ಸಹಾಯಕ ನಿರ್ದೇಶಕರು ಹಣ ಸಂದಾಯ ಸ್ವೀಕೃತಿಯ ಮೇಲೆ ಕಬ್ಬು ಅಭಿವೃದ್ಧಿ ಆಯುಕ್ತರ ಮೇಲು ರುಜುವಿನೊಂದಿಗೆ ಈ ಹಣವನ್ನು ಖಜಾನೆಯಿಂದ ಪಡೆದು ನ್ಯಾಯಾಲಯದಲ್ಲಿ ಠೇವಣಿ ಇರಿಸತಕ್ಕದ್ದು.

ಈ ಆದೇಶವನ್ನು ದಿನಾಂಕ: 6.9.2010 ಆಇ 291 ವೆಚ್ಚ–2/2010ನೇ ಸಂಖ್ಯೆಯ ಅನಧಿಕೃತ ಟಿಪ್ಪಣಿ ಮೂಲಕ ಆರ್ಥಿಕ ಇಲಾಖೆಯು ನೀಡಿರುವ ಸಹಮತದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ. ಶ್ರೀನಿವಾಸ್**

ಸರ್ಕಾರದ ಅಧೀನ ಕಾರ್ಯದರ್ಶಿ,

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ಸಹಕಾರಿ ಸಕ್ಕರೆ)

ಪಿ.ಆರ್. 2399

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ಮಂಡ್ಯ ಜಿಲ್ಲೆಯ ಪಾಂಡವಪುರ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತಕ್ಕೆ ದುಡಿಯುವ ಬಂಡವಾಳವನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :**
1) ದಿನಾಂಕ 31–05–2010ರ ಸಂಖ್ಯೆ ವಾಕೈ 87 ಸಸಕಾ 2008 (ಭಾಗ) ನೇ ಸಂಖ್ಯೆಯ ಸರ್ಕಾರದ ಆದೇಶ.
2) ದಿನಾಂಕ: 26–6–2010 ಸಂಖ್ಯೆ ವಾಕೈ 87 ಸಸಕಾ 2008(ಭಾಗ)ನೇ ಸಂಖ್ಯೆಯ ಸರ್ಕಾರದ ಆದೇಶ.
3) ದಿನಾಂಕ: 06–07–2010 ಸಂಖ್ಯೆ ಆಇ 87 ಬಿಎಸ್‌ಎಫ್ ಸಂಖ್ಯೆಯ ಆರ್ಥಿಕ ಇಲಾಖೆಯ ಆದೇಶ.
4) ದಿನಾಂಕ: 18–8–2010ರ ಪಿ.ಎಸ್.ಎಸ್.ಕೆ/ಹಣಕಾಸು ಲೆಕ್ಕ/2010–11 ಸಂಖ್ಯೆಯ ಪಾಂಡವಪುರ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ.

**ಪ್ರಸ್ತಾವನೆ :**

ಪಾಂಡವಪುರ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತವನ್ನು 2010ನೇ ಜೂನ್ ತಿಂಗಳಿನಿಂದ ಪ್ರಾರಂಭಿಸುವ ಸಲುವಾಗಿ ಈ ಕಾರ್ಖಾನೆಯ ಕಾರ್ಯ ನಿರ್ವಹಣೆಯನ್ನು (Opereation and Management) ಮಂಡ್ಯದ ದಿ ಮೈಸೂರು ಶುಗರ್ ಕಂಪನಿ ಲಿಮಿಟೆಡ್‌ಗೆ ಮೂರು (3) ವರ್ಷಗಳ ಅವಧಿಗೆ ವಹಿಸಿಕೊಡಲು ದಿನಾಂಕ: 31–05–2010ರಂದು ಸರ್ಕಾರದ ಆದೇಶವನ್ನು ಹೊರಡಿಸಲಾಗಿರುತ್ತದೆ.

ಪಾಂಡವಪುರ ಸಹಕಾರಿ ಸಕ್ಕರೆ ಕಾರ್ಖಾನೆಯನ್ನು 2010ನೇ ಜೂನ್ ತಿಂಗಳಿನಿಂದ ಪ್ರಾರಂಭಿಸುವ ಸಲುವಾಗಿ Rs. 5.00 ಕೋಟಿಗಳ ದುಡಿಯುವ ಬಂಡವಾಳವನ್ನು ಮಂಜೂರು ಮಾಡಿ ದಿನಾಂಕ: 26–06–2010 ಮತ್ತು ದಿನಾಂಕ:06–07–2010ರಂದು ಸರ್ಕಾರದ ಆದೇಶಗಳನ್ನು ಹೊರಡಿಸಲಾಗಿರುತ್ತದೆ.

ಪಾಂಡವಪುರ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ದಿನಾಂಕ: 18–8–2010 ರಂದು ಸರ್ಕಾರಕ್ಕೆ ಪತ್ರವನ್ನು ಬರೆದು ಪಾಂಡವಪುರ ಸಹಕಾರಿ ಸಕ್ಕರೆ ಕಾರ್ಖಾನೆಯನ್ನು 2010ನೇ ಜೂನ್ ತಿಂಗಳಿನಿಂದ ಪ್ರಾರಂಭಿಸುವ ಸಲುವಾಗಿ ಈಗಾಗಲೇ ಬಿಡುಗಡೆ ಮಾಡಿರುವ Rs.5.00 ಕೋಟಿಗಳ ದುಡಿಯುವ ಬಂಡವಾಳವಲ್ಲದೆ ಇನ್ನು Rs. 10.00 ಕೋಟಿಗಳ ದುಡಿಯುವ ಬಂಡವಾಳವನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ. ಈ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ವಾಕೈ 78 ಸಸಕಾ 2010, ಬೆಂಗಳೂರು, ದಿನಾಂಕ: 09–09–2010**

ಪ್ರಸ್ತಾವನೆಯ ವಿವರಣೆಗಳ ಹಿನ್ನೆಲೆಯಲ್ಲಿ, ಪಾಂಡವಪುರ ಸಹಕಾರಿ ಸಕ್ಕರೆ ಕಾರ್ಖಾನೆಗೆ ಮತ್ತೆ Rs.5.00 ಕೋಟಿ (ಐದು ಕೋಟಿ ರೂಪಾಯಿಗಳು ಮಾತ್ರ) ದುಡಿಯುವ ಬಂಡವಾಳವನ್ನು ಸರ್ಕಾರವು ಮಂಜೂರು ಮಾಡಿದೆ.

ಈ ಮೊತ್ತವನ್ನು ಲೆಕ್ಕ ಶೀರ್ಷಿಕೆ 6860–04–101–0–10–394 **(p) (SE-I 2010-11)** ಇದರಡಿಯಲ್ಲಿ ಭರಿಸತಕ್ಕದ್ದು.

ಕಬ್ಬು ಅಭಿವೃದ್ಧಿ ಆಯುಕ್ತರು ಮತ್ತು ಸಕ್ಕರೆ ನಿರ್ದೇಶಕರ ಕಛೇರಿಯ ಸಹಕಾರ ಸಂಘಗಳ ಲೆಕ್ಕ ಪರಿಶೋಧನಾ ಸಹಾಯಕ ನಿರ್ದೇಶಕರು ಹಣ ಸಂದಾಯ ಸ್ವೀಕೃತಿಯ ಮೇಲೆ ಕಬ್ಬು ಅಭಿವೃದ್ಧಿ ಆಯುಕ್ತರ ಮೇಲು ರುಜುವಿನೊಂದಿಗೆ ಈ ಹಣವನ್ನು ಖಜಾನೆಯಿಂದ ಪಡೆದು ಪಾಂಡವಪುರ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತಕ್ಕೆ ಬಿಡುಗಡೆ ಮಾಡತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯು ಅನಧಿಕೃತ ಟಿಪ್ಪಣಿ ದಿನಾಂಕ: 09–09–2010ರ ಆಇ 331 ವೆಚ್ಚ–2/10ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ. ಶ್ರೀನಿವಾಸ್**

ಸರ್ಕಾರದ ಅಧೀನ ಕಾರ್ಯದರ್ಶಿ,

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ. (ಸಹಕಾರಿ ಸಕ್ಕರೆ)

ಪಿ.ಆರ್. 2400

## ವಸತಿ ಸಚಿವಾಲಯ

**ವಿಷಯ :** ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮ ನಿಯಮಿತದ ಶೇರುದಾರರ ಬದಲಾವಣೆ ಕುರಿತು.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ವಇ 183 ಹೆಚ್ಎಹೆಚ್ 99, ದಿನಾಂಕ: 31–3–2003.
2. ಸರ್ಕಾರದ ಆದೇಶ ಸಂಖ್ಯೆ: ವಇ 80 ಹೆಚ್ಎಹೆಚ್ 2009, ದಿನಾಂಕ: 29–8–2009
3. ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮ ನಿಯಮಿತದ ಪತ್ರ ಸಂಖ್ಯೆ ಆರ್‌ಜಿಆರ್ ಹೆಚ್‌ಸಿಎಲ್ / 08/ಎಡಿಎಂ/13/2002, ದಿನಾಂಕ: 28.08.2010

**ಪ್ರಸ್ತಾವನೆ :**

ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮವು ಒಂದು ಸಾರ್ವಜನಿಕ ನಿಯಮಿತ ಸಂಸ್ಥೆಯಾಗಿದ್ದು ತಲಾ 100 ರೂ.ಗಳ ಒಟ್ಟು 3.00 ಲಕ್ಷಗಳ ಶೇರುಗಳ ಸಂದಾಯಿತ ಬಂಡವಾಳ ಹೊಂದಿರುತ್ತದೆ. ಇದರಲ್ಲಿ 2,99,993 ಶೇರುಗಳು ಘನತೆವೆತ್ತ ರಾಜ್ಯಪಾಲರು ಹೊಂದಿದ್ದು, ಉಳಿದ 7 ಶೇರುಗಳನ್ನು ಕರ್ನಾಟಕ ಸರ್ಕಾರದ ವತಿಯಿಂದ 7 ಅಧಿಕಾರಿಗಳ ಹೆಸರಿನಲ್ಲಿರುತ್ತದೆ. ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಆದೇಶದಲ್ಲಿ 7 ಅಧಿಕಾರಿಗಳ ಹೆಸರಿನಲ್ಲಿ ಶೇರು ವರ್ಗಾವಣೆ ಮಾಡಿ ಸರ್ಕಾರದ ಆದೇಶ ಹೊರಡಿಸಿದ್ದು, ಮೇಲೆ ಓದಲಾದ ಕ್ರಮ. ಸಂ. (3)ರ ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮದ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮ ರವರು ಹಾಗೂ ಕಾರ್ಯದರ್ಶಿಗಳು ಆರ್ಥಿಕ ಇಲಾಖೆ ಇವರು ವರ್ಗಾವಣೆಗೊಂಡಿರುವುದರಿಂದ ಶೇರುದಾರರ ಬದಲಾವಣೆ ಆದೇಶ ಕೋರಿದ್ದು, ಅಂತೆಯೇ ಈ ಕೆಳಕಾಣಿಸಿದ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ ವಇ 80 ಹೆಚ್ಎಎಂ 2009, ಬೆಂಗಳೂರು, ದಿನಾಂಕ: 9ನೇ ಸೆಪ್ಟೆಂಬರ್ 2010**

ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮ ನಿಯಮಿತದ ಸಂಸ್ಥಾ ನಿವೇದನಾ ಪತ್ರದ ಅನುಚ್ಛೇದ 63 ರಿಂದ 69ರಲ್ಲಿ ಪ್ರದತ್ತವಾದ ಅಧಿಕಾರದ ಮೇರೆಗೆ ಈ ಕೆಳಕಾಣಿಸಿದಂತೆ ಶೇರುಗಳನ್ನು ಅಧಿಕಾರಿಗಳಿಗೆ ವರ್ಗಾಯಿಸಲು ಸರ್ಕಾರದ ಅನುಮತಿ ನೀಡಲಾಗಿದೆ.

| ಕ್ರಸಂ | ಶೇರುಹೊಂದಿರುವ ಅಧಿಕಾರಿಗಳ ಹೆಸರು | ಶೇರುಗಳನ್ನು ವರ್ಗಾಯಿಸಲ್ಪಡಬೇಕಾಗಿರುವ ಅಧಿಕಾರಿಗಳ ಹೆಸರು |
|---|---|---|
| 1 | ಶ್ರೀ ಎಸ್.ಎಸ್.ಪಟ್ಟಣಶೆಟ್ಟಿ, ಐ.ಎ.ಎಸ್. | ಡಾ॥ ಜೆ. ರವಿಶಂಕರ್, ಐ.ಎ.ಎಸ್., ವ್ಯವಸ್ಥಾಪಕ ನಿರ್ದೇಶಕರು, ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮ ನಿಯಮಿತ. |
| 2 | ಶ್ರೀ ಅನಿಲ್ ಕುಮಾರ್ ಝಾ, ಐ.ಎ.ಎಸ್. | ಶ್ರೀ ರಘುರಾಮ ಭಂಡಾರಿ, ಸರ್ಕಾರದ ಉಪ ಕಾರ್ಯದರ್ಶಿ, ಆರ್ಥಿಕ ಇಲಾಖೆ. |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಆರ್. ವಲ್ಲೂರ**

ಪೀಠಾಧಿಕಾರಿ–2, ವಸತಿ ಇಲಾಖೆ.

ಪಿ.ಆರ್. 2401

## ವಸತಿ ಸಚಿವಾಲಯ

**ವಿಷಯ :** ತುಮಕೂರು ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.

**ಓದಲಾಗಿದೆ :** (1) ಸರ್ಕಾರದ ಆದೇಶ ಸಂಖ್ಯೆ: ವಇ/42/ಹೆಚ್‌ಎಎಂ/1999, ದಿನಾಂಕ: 10-05-2010.
(2) ಸರ್ಕಾರದ ಆದೇಶ ಸಂ.ವಇ/18/ಹೆಚ್‌ಎಎಸ್/2008, ದಿನಾಂಕ: 16.09.2009.

**ಪ್ರಸ್ತಾವನೆ :**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಮೇಲೆ (1) ರಲ್ಲಿ ಓದಲಾದ ಆದೇಶದನ್ವಯ ಮತ್ತು ಮೇಲೆ (2) ರಲ್ಲಿ ಓದಲಾದ ಆದೇಶವನ್ನು ಮುಂದುವರೆಸುತ್ತಾ, ತುಮಕೂರು ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂ : ವಇ 138 ಹೆಚ್‌ಎಎಸ್ 2010, ಬೆಂಗಳೂರು, ದಿನಾಂಕ : 7ನೇ ಸೆಪ್ಟೆಂಬರ್ 2010**

ತುಮಕೂರು ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ ರಚಿಸಲಾಗಿದೆ.

| | ಅಭ್ಯರ್ಥಿಯ ಹೆಸರು | ವರ್ಗ |
|---|---|---|
| 1 | ಶ್ರೀ ದಿನೇಶ್ ಬಿನ್.ಆರ್. ಬಾಬುರಾವ್, ವಿಷನ್, 1ನೇ ಕ್ರಾಸ್, ಸಿ.ಎಸ್.ಐ.ಲೇಔಟ್, ವಿವೇಕಾನಂದ ನಗರ, ತುಮಕೂರು. | ಅಲ್ಪಸಂಖ್ಯಾತರು |
| 2 | ಶ್ರೀ ವೈ. ಲಕ್ಷ್ಮೀನಾರಾಯಣ ಬಿನ್ ಯಲ್ಲಪ್ಪ ಎನ್., ಲಕ್ಷ್ಮೀನರಸಿಂಹ ಕೇಬಲ್ಸ್, ಉಪ್ಪಾರಹಳ್ಳಿ, ಮುಖ್ಯ ರಸ್ತೆ, ತುಮಕೂರು. | ಹಿಂದುಳಿದ ವರ್ಗ |
| 3 | ಶ್ರೀ ಪಂಚಾಕ್ಷರಯ್ಯ, ಎಂ.ಬಿ.ಬಿನ್ ಎಂ.ಎಲ್. ಬಸಪ್ಪ, 6ನೇ ಮುಖ್ಯ ರಸ್ತೆ, 2ನೇ ಕ್ರಾಸ್ ಸದಾಶಿವನಗರ, ತುಮಕೂರು. | ಸಾಮಾನ್ಯ |
| 4 | ಶ್ರೀಮತಿ ನಂಜಮ್ಮ ಕೋಂ ಚಂದ್ರಯ್ಯ, ನಿರ್ವಾಣಿ ಲೇಔಟ್, ಬೆಳಗುಂಬ ರಸ್ತೆ, ತುಮಕೂರು. | ಪರಿಶಿಷ್ಟ ಜಾತಿ (ಮಹಿಳೆ) |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಆರ್. ವಲ್ಲೂರ**

ಪಿ.ಆರ್. 2402 ಪೀಠಾಧಿಕಾರಿ-2, ವಸತಿ ಇಲಾಖೆ.

## ಒಳಾಡಳಿತ ಸಚಿವಾಲಯ

**ವಿಷಯ :** ಚಿತ್ರದುರ್ಗ ಜಿಲ್ಲೆಯ ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದವರ ಮೇಲಿನ ದೌರ್ಜನ್ಯ ಅಪರಾಧ ಪ್ರಕರಣಗಳ ವಿಚಾರಣೆಗಾಗಿ ವಿಶೇಷ ನಾಂಯ್ಯಾಲಯ (ಜಿಲ್ಲಾ ನ್ಯಾಯಾಧೀಶರ ಶ್ರೇಣಿ)ಕ್ಕೆ ಹೊಂದಿಕೊಂಡಂತೆ ಸರ್ಕಾರಿ ಅಭಿಯೋಜಕರ ಹಾಗೂ ಪೂರಕ ಸಿಬ್ಬಂದಿಯ ಹುದ್ದೆಗಳ ಸೃಜನೆ ಕುರಿತು.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂ:ಲಾ 47 ಎಲ್‌ಸಿಇ 2004, ದಿನಾಂಕ: 23.06.2005.
2. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರದ ಸಂಖ್ಯೆ: ಡಿಪಿಎನ್/ಸಿಶಾ1/223/2009-10, ದಿನಾಂಕ: 17.12.2009.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ: 23.06.2005ರ ಸರ್ಕಾರದ ಆದೇಶದನ್ವಯ ಚಿತ್ರದುರ್ಗ ಜಿಲ್ಲೆಯ ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದವರ ಮೇಲಿನ ದೌರ್ಜನ್ಯ ಅಪರಾಧ ಪ್ರಕರಣಗಳ ವಿಚಾರಣೆಗಾಗಿ ವಿಶೇಷ ನ್ಯಾಯಾಲಯ(ಜಿಲ್ಲಾ ನ್ಯಾಯಾಧೀಶರ ಶ್ರೇಣಿ)ದ ಸ್ಥಾಪನೆಗೆ ಸರ್ಕಾರವು ಮಂಜೂರಾತಿ ನೀಡಿದೆ.

ಮೇಲೆ (2)ರಲ್ಲಿ ಓದಲಾದ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರು ದಿನಾಂಕ: 17.12.2009ರ ಪತ್ರದಲ್ಲಿ ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದನ್ವಯ ಸ್ಥಾಪಿತವಾಗಿರುವ ನ್ಯಾಯಾಲಯದಲ್ಲಿ ಸರ್ಕಾರದ ಪರವಾಗಿ ರಾಜ್ಯವನ್ನು ಪ್ರತಿನಿಧಿಸಿ, ಪ್ರಕರಣಗಳನ್ನು ನಡೆಸಲು, ಸದರಿ ನ್ಯಾಯಾಲಯಕ್ಕೆ ಹೊಂದಿಕೊಂಡಂತೆ ಈ ಕೆಳಕಂಡ ಹುದ್ದೆಗಳನ್ನು ಇಲಾಖೆಗೆ ಸೃಜಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

| ಕ್ರ.ಸಂ. | ಹುದ್ದೆಯ ಹೆಸರು | ಹುದ್ದೆಯ ಸಂಖ್ಯೆ |
|---|---|---|
| 1. | ಸರ್ಕಾರಿ ಅಭಿಯೋಜಕರು | 01 |
| 2. | ಪ್ರಥಮ ದರ್ಜೆ ಸಹಾಯಕರು | 01 |
| 3. | ಶೀಘ್ರಲಿಪಿಗಾರರು | 01 |
| 4. | ಬೆರಳಚ್ಚುಗಾರರು | 01 |
| 5. | ಅಟೆಂಡರ್ | 01 |
| 6. | ದಲಾಯತ್ | 01 |
| | **ಒಟ್ಟು ಹುದ್ದೆಗಳು** | **06** |

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 454 ಪಿಪಿಇ 2009, ಬೆಂಗಳೂರು, ದಿನಾಂಕ : 8ನೇ ಸೆಪ್ಟೆಂಬರ್ 2010.**

ಪ್ರಸ್ತಾವನೆಯಲ್ಲಿನ ವಿವರಗಳ ಹಿನ್ನೆಲೆಯಲ್ಲಿ, ಚಿತ್ರದುರ್ಗ ಜಿಲ್ಲೆಯ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದವರ ಮೇಲಿನ ದೌರ್ಜನ್ಯ ಅಪರಾಧ ಪ್ರಕರಣಗಳ ವಿಚಾರಣೆಗಾಗಿ ವಿಶೇಷ ನ್ಯಾಯಾಲಯ(ಜಿಲ್ಲೆ ನ್ಯಾಯಾಧೀಶರ ಶ್ರೇಣಿ)ಕ್ಕೆ ಹೊಂದಿಕೊಂಡಂತೆ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ಈ ಕೆಳಕಂಡ ಹುದ್ದೆಗಳನ್ನು ಮೊದಲ ಬಾರಿಗೆ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಸೃಜಿಸಿದೆ.

| ಕ್ರ.ಸಂ. | ಹುದ್ದೆಯ ಹೆಸರು | ಹುದ್ದೆಯ ಸಂಖ್ಯೆ |
|---|---|---|
| 1. | ಸರ್ಕಾರಿ ಅಭಿಯೋಜಕರು | 01 |
| 2. | ಪ್ರಥಮ ದರ್ಜೆ ಸಹಾಯಕ | 01 |
| 3. | ಶೀಘ್ರಲಿಪಿಗಾರ | 01 |
| 4. | ದಲಾಯತ್ | 01 |

ಸದರಿ ಹುದ್ದೆಗಳಿಗೆ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ 2014–ನ್ಯಾಯಾಪರಿಪಾಲನೆ–00–114–ಕಾನೂನು ಸಲಹೆಗಾರರು ಮತ್ತು ಸಮೂಪದೇಶಕರು–0–02 ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರು ಇದರಡಿ ಭರಿಸತಕ್ಕದ್ದು.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ: ಎಫ್‌ಡಿ 210 ವೆಚ್ಚ–11/2010, ದಿನಾಂಕ: 23.08.2010ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಸಿ. ಸಿದ್ದಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ ಹಾಗೂ ಕಾಫಿಪೋಸ ಮತ್ತು ಅಭಿಯೋಗಗಳು)

ಪಿ.ಆರ್. 2403

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಶಿವಮೊಗ್ಗ ಜಿಲ್ಲೆ ಸಾಗರ ತಾಲ್ಲೂಕಿನ ಶಿರೂರು ಬಳಿ ಶಿರವಂತೆ ಗ್ರಾಮದ ಸರ್ವೆ ನಂ.34, 26 ಬಳಿ ಮುದುಗೆ ಹಳ್ಳಕ್ಕೆ ಅಡ್ಡಲಾಗಿ ಪಿಕಪ್ ನಿರ್ಮಾಣ ಕಾಮಗಾರಿಯ ಟೆಂಡರನ್ನು ಅನುಮೋದಿಸುವ ಬಗ್ಗೆ.

**ಓದಲಾಗಿದೆ :** 1. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರುರವರ ಪತ್ರದ ಸಂಖ್ಯೆ: ಮುಸ(ದ)/ತಾಂ–3/ಸ.ಇಂ.–8/ಶಿವಮೊಗ್ಗ/ಇ–ಟೆಂಡರ್/2009–10/2131 ದಿನಾಂಕ: 02.07.2010.
2. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ರವರ ದಿನಾಂಕ: 28.08.2010 ಪತ್ರ ಸಂಖ್ಯೆ: ಮುಸದ/ಆಪ್ತಶಾಖೆ/ ಟೆಂಡರ್/ 09–10/1920.

**ಪ್ರಸ್ತಾವನೆ :**

ಶಿವಮೊಗ್ಗ ಜಿಲ್ಲೆ ಸಾಗರ ತಾಲ್ಲೂಕಿನ ಶಿರೂರು ಬಳಿ ಶಿರವಂತೆ ಗ್ರಾಮದ ಸರ್ವೆ ನಂ.34, 26 ಬಳಿ ಮುದುಗೆ ಹಳ್ಳಕ್ಕೆ ಅಡ್ಡಲಾಗಿ ಪಿಕಪ್ ನಿರ್ಮಾಣ ಕಾಮಗಾರಿಯ ರೂ. 16.00 ಲಕ್ಷ ರೂ.ಗಳ ಅಂದಾಜು ಪಟ್ಟಿಗೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರುರವರು ಆಡಳಿತಾತ್ಮಕ ಅನುಮೋದನೆ ನೀಡಿದ್ದು ಅಧೀಕ್ಷಕ ಇಂಜಿನಿಯರ್, ಸಣ್ಣ ನೀರಾವರಿ ವೃತ್ತ ಬೆಂಗಳೂರುರವರು ನೋಂದಣಿ ಸಂಖ್ಯೆ 135/2009–10ರಡಿ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಶಿವಮೊಗ್ಗ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಜಿಲ್ಲಾ ಟೆಂಡರ್ ಬುಲೆಟಿನ್ | 26.12.2009 |
| ಪ್ರಜಾವಾಣಿ ದಿನಪತ್ರಿಕೆ | 10.03.2010 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಇಬ್ಬರು ಗುತ್ತಿಗೆದಾರರು ಟೆಂಡರ್‌ನಲ್ಲಿ ಭಾವಗಹಿಸಿರುವುದಾಗಿ ವರದಿಯಾಗಿದೆ. ಸದರಿ ಗುತ್ತಿಗೆದಾರರ ಟೆಂಡರ್‌ನ್ನು ದಿನಾಂಕ: 22.03.2010 ರಂದು ತೆರದು ಪರಿಶೀಲಿಸಲಾಗಿದ್ದು ಈ ಇಬ್ಬರು ಗುತ್ತಿಗೆದಾರರು ಅರ್ಹರಾಗಿದ್ದು ಸದರಿಯವರ ಟೆಂಡರ್‌ನ ವಿವರಗಳು ಕೆಳಕಂಡಂತಿವೆ.

| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | ರೂ. 15,96,192/– | |
|---|---|---|---|---|
| ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದ ಟೆಂಡರಿಗೆ ಇಡಲಾದ ಮೊತ್ತ | | | ರೂ. 15,01,006/– | |
| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ / ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| 1 | ವಿ.ದಯಾನಂದ ಪ್ರಥಮ ದರ್ಜೆ ಗುತ್ತಿಗೆದಾರರು. | 16,60,325/– | 4.00 ಹೆಚ್ಚು | 10.61 ಹೆಚ್ಚು |
| 2 | ಎನ್. ಆರ್. ಶ್ರೀನಿವಾಸ್ ಪ್ರಥಮ ದರ್ಜೆ ಗುತ್ತಿಗೆದಾರರು. | 16,98,429/– | 6.40 ಹೆಚ್ಚು | 13.15 ಹೆಚ್ಚು |

ಮೇಲ್ಕಂಡಂತೆ ಶ್ರೀ ವಿ.ದಯಾನಂದ, 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 10.61ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರು ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 24/07/2010ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕುಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 15,01,006/–ಗಳ ಮೇಲೆ ಶೇಕಡ 9.50ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.16,43,602/–ಗಳಿಗೆ ಕಾಮಗಾರಿಯನ್ನು ಶ್ರೀ ವಿ.ದಯಾನಂದ, 1ನೇ ದರ್ಜೆ ಗುತ್ತಿಗೆದಾರರಿಗೆ ವಹಿಸುವಂತೆ ಶಿಫಾರಸ್ಸು ಮಾಡಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 3ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 23 ಅಪಿಬಂ 2010, ಬೆಂಗಳೂರು, ದಿನಾಂಕ : 08ನೇ ಸೆಪ್ಟೆಂಬರ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶಿವಮೊಗ್ಗ ಜಿಲ್ಲೆ ಸಾಗರ ತಾಲ್ಲೂಕಿನ ಶಿರೂರು ಬಳಿ ಶಿರವಂತೆ ಗ್ರಾಮದ ಸರ್ವೆ ನಂ.34, 26 ಬಳಿ ಮುದುಗೆ ಹಳ್ಳಕ್ಕೆ ಅಡ್ಡಲಾಗಿ ಪಿಕಪ್ ನಿರ್ಮಾಣ ಕಾಮಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ 15,01,006/–ಗಳ ಮೇಲೆ ಶೇಕಡ 9.50ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.16,43,602/–ಗಳಿಗೆ(ಹದಿನಾರು ಲಕ್ಷದ ನಲವತ್ಮೂರು ಸಾವಿರದ ಆರು ನೂರ ಎರಡು ರೂ.ಗಳು ಮಾತ್ರ) ಶ್ರೀ ವಿ.ದಯಾನಂದ, 1ನೇ ದರ್ಜೆ ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 2404 ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಉಡುಪಿ ಜಿಲ್ಲೆ ಹಾಗೂ ತಾಲ್ಲೂಕಿನ ಆರೂರು ಗ್ರಾಮದ ಹತ್ತಿರ ಉಗ್ಗೇಲ್ ಬೆಟ್ಟು ಎಂಬಲ್ಲಿ ಮಡಿಸಾಲು ಹೊಳೆಗೆ ಅಡ್ಡಲಾಗಿ ಉಪ್ಪುನೀರು ತಡೆ ಕಿಂಡಿ ಅಣೆಕಟ್ಟು ನಿರ್ಮಾಣ ಕಾಮಗಾರಿಯ ಟೆಂಡರನ್ನು ಅನುಮೋದಿಸುವ ಬಗ್ಗೆ.

**ಓದಲಾಗಿದೆ :** 1. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರುರವರ ಪತ್ರದ ಸಂಖ್ಯೆ: ಮುಸ(ದ)/ತಾಂ.5/ಸ.ಇಂ. 11/ಉ.ಜಿ/ಉ.ತಾ/ಉಗ್ಗೇಲ್ ಬೆಟ್ಟು ಉನೀಕಿಂಅ/ಇ–ಪ್ರೊಕ್ಯೂರ್‌ಮೆಂಟ್/ಟೆಂಡರನ್ನು ಅನುಮೋದನೆ/2010/2313 ದಿನಾಂಕ: 22.07.2010

2. ಸರ್ಕಾರದ ಆದೇಶ ಸಂಖ್ಯೆ: ಸನೀಇ/06/ನಯೋಕಾ/2009 ದಿನಾಂಕ: 06.01.2010.

3. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವಾರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ರವರ ದಿನಾಂಕ 28.08.2010 ಪತ್ರ ಸಂಖ್ಯೆ: ಮುಸದ/ಆಪ್ತಶಾಖೆ/ ಟೆಂಡರ್/ 09–10/1920.

**ಪ್ರಸ್ತಾವನೆ :**

ಉಡುಪಿ ಜಿಲ್ಲೆ ಹಾಗೂ ತಾಲ್ಲೂಕಿನ ಆರೂರು ಗ್ರಾಮದ ಹತ್ತಿರ ಉಗ್ಗೇಲ್ ಬೆಟ್ಟು ಎಂಬಲ್ಲಿ ಮಡಿಸಾಲು ಹೊಳೆಗೆ ಅಡ್ಡಲಾಗಿ ಉಪ್ಪುನೀರು ತಡೆ ಕಿಂಡಿ ಅಣೆಕಟ್ಟು ನಿರ್ಮಾಣ ಕಾಮಗಾರಿಯು, ಸರ್ಕಾರದ ಆದೇಶ ಸಂಖ್ಯೆ: ಸನೀಇ 06 ನಯೋಕಾ 2009, ದಿನಾಂಕ: 06.01.2010ರಲ್ಲಿ ಆರ್.ಐ.ಡಿ.ಎಫ್–15 ರಡಿ ರೂ.15045.45 ಲಕ್ಷ ಅಂದಾಜು ಮೊತ್ತದ 385 ಕಾಮಗಾರಿಗಳ ಅಂದಾಜುಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡಿರುವ ಕಾಮಗಾರಿಗಳ ಪೈಕಿ ಒಂದಾಗಿದ್ದು, ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರುರವರು ನೋಂದಣಿ ಸಂಖ್ಯೆ: 128/2009–10ರಲ್ಲಿ ಅಂದಾಜಿಗೆ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಮಂಗಳೂರು ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ರಾಜ್ಯ ಟೆಂಡರ್ ಬುಲೆಟಿನ್ | 05.04.2010 |
| ಜಿಲ್ಲಾ ಟೆಂಡರ್ ಬುಲೆಟಿನ್ | 05.04.2010 |
| ಪ್ರಜಾವಾಣಿ ದಿನಪತ್ರಿಕೆ | 08.04.2010 |
| ಟೈಮ್ಸ್ ಆಫ್ ಇಂಡಿಯಾ ಆಂಗ್ಲ ದಿನಪತ್ರಿಕೆ | 07.04.2010 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಇಬ್ಬರು ಗುತ್ತಿಗೆದಾರರು ಟೆಂಡರ್‌ನಲ್ಲಿ ಭಾವಗಹಿಸಿರುವುದಾಗಿ ವರದಿಯಾಗಿದೆ. ದಿನಾಂಕ: 13.05.2010 ರಂದು ತಾಂತ್ರಿಕ ಬಿಡ್‌ಗಳನ್ನು ತೆರೆಯಲಾಗಿದ್ದು, ಇವರಲ್ಲಿ ಒಬ್ಬರು ಗುತ್ತಿಗೆದಾರರು ಮಾತ್ರ ಅರ್ಹರಾಗಿದ್ದು ಇವರ ಆರ್ಥಿಕ ಬಿಡ್ ಅನ್ನು ದಿನಾಂಕ: 02.06.2010ರಂದು ತೆರೆದಿರುವುದಾಗಿ ವರದಿಯಾಗಿದೆ. ವಿವರಗಳು ಕೆಳಕಂಡಂತಿವೆ.

| **ಮಂಜೂರಾದ ಅಂದಾಜಿನ ದರಗಳಂತೆ ಹಾಗೂ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ** | | | **ರೂ. 1,32,61,928/–** |
|---|---|---|---|
| **ಕ್ರಮ ಸಂಖ್ಯೆ** | **ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ / ಮೆಸರ್ಸ್** | **ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ** | **ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ** |
| 1 | ಜಿ.ಗೋಕುಲ್ ಶೆಟ್ಟಿ<br>ಪ್ರಥಮ ದರ್ಜೆ ಗುತ್ತಿಗೆದಾರರು. | 1,46,97,985/– | 10.828<br>ಹೆಚ್ಚು |

ಮೇಲ್ಕಂಡಂತೆ ಶ್ರೀ ಜಿ.ಗೋಕುಲ್ ಶೆಟ್ಟಿ, 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 10.828ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಸಂದಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರು ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 24/07/2010ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕುಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 1,32,61,928/–ಗಳ ಮೇಲೆ ಶೇಕಡ 10.50ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.1,46,54,430/–ಗಳಿಗೆ ಕಾಮಗಾರಿಯನ್ನು ಶ್ರೀ ಜಿ.ಗೋಕುಲ್ ಶೆಟ್ಟಿ, 1ನೇ ದರ್ಜೆ ಗುತ್ತಿಗೆದಾರರಿಗೆ ವಹಿಸುವಂತೆ ಶಿಫಾರಸ್ಸು ಮಾಡಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 3ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 27 ಅಪಿಬಂ 2010, ಬೆಂಗಳೂರು, ದಿನಾಂಕ : 08ನೇ ಸೆಪ್ಟೆಂಬರ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಉಡುಪಿ ಜಿಲ್ಲೆ ಹಾಗೂ ತಾಲ್ಲೂಕಿನ ಆರೂರು ಗ್ರಾಮದ ಹತ್ತಿರ ಉಗ್ಗೇಲ್ ಬೆಟ್ಟು ಎಂಬಲ್ಲಿ ಮಡಿಸಾಲು ಹೊಳೆಗೆ ಅಡ್ಡಲಾಗಿ ಉಪ್ಪುನೀರು ತಡೆ ಕಿಂಡಿ ಅಣೆಕಟ್ಟು ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 1,32,61,928/–ಗಳ ಮೇಲೆ ಶೇಕಡ 10.50ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 1,46,54,430/–(ಒಂದು ಕೋಟಿ ನಲವತ್ತಾರು ಲಕ್ಷದ ಐವತ್ನಾಲ್ಕು ಸಾವಿರದ ನಾಲ್ಕು ನೂರ ಮೂವತ್ತು ರೂ.ಗಳು ಮಾತ್ರ) ಶ್ರೀ ಜಿ.ಗೋಕುಲ್ ಶೆಟ್ಟಿ, 1ನೇ ದರ್ಜೆ ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20/01/2003ರಲ್ಲಿ ಇಲಾಖಾ ಕಾರ್ಯದರ್ಶಿ–ಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 2405 ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಸಹಕಾರ ಸಚಿವಾಲಯ

**ವಿಷಯ :** ನಂದಿನಿ ಲೇಔಟ್ ಪರಿಸರ ಸಂರಕ್ಷಣಾ ಸಂಘ (ರಿ) ಈ ಸಂಘಕ್ಕೆ ನೇಮಕ ಮಾಡಿರುವ ಆಡಳಿತಾಧಿಕಾರಿಗಳ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ :** (1) ಸರ್ಕಾರದ ಆದೇಶ ಸಂಖ್ಯೆ: ಸ ಇ 104 ಸಸಂನೋ 2009 ದಿನಾಂಕ: 17–12–2009.

(2) ಸಹಕಾರ ಸಂಘಗಳ ನಿಬಂಧಕರು, ಬೆಂಗಳೂರು ಇವರ ಪತ್ರ ಸಂಖ್ಯೆ: ಡಿಆರ್/ಎಸ್ಒಆರ್/ಪಿಟಿಎನ್/84/2010–11 ದಿನಾಂಕ: 2–8–2010.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ: (1) ರ ದಿನಾಂಕ: 17–12–2009 ರ ಸರ್ಕಾರದ ಆದೇಶದಲ್ಲಿ, ನಂದಿನಿ ಲೇಔಟ್ ಪರಿಸರ ಸಂರಕ್ಷಣಾ ಸಂಘ (ರಿ), ಬೆಂಗಳೂರು ಈ ಸಂಸ್ಥೆಯ ಹಿತದೃಷ್ಟಿಯಿಂದ, ಸಂಸ್ಥೆಯ ಪ್ರಸ್ತುತ ಆಡಳಿತ ಮಂಡಳಿಯನ್ನು ರದ್ದುಪಡಿಸಿ, ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ಕಲಂ 27(ಎ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ನಂದಿನಿ ಲೇಔಟ್ ಪರಿಸರ ಸಂರಕ್ಷಣಾ ಸಂಘ(ರಿ), ಬೆಂಗಳೂರು ಈ ಸಂಘಕ್ಕೆ ಸಹಕಾರ ಸಂಘಗಳ ಉಪ ನಿಬಂಧಕರು, ಬೆಂಗಳೂರು ಇವರನ್ನು ಆಡಳಿತಾಧಿಕಾರಿಯಾಗಿ ಆರು ತಿಂಗಳ ಅವಧಿಗೆ ಅಥವಾ ಸದರಿ ಸಂಘದ ಹಾಲಿ ಸದಸ್ಯರಿಂದ ಕೂಡಲೇ ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ನೇಮಿಸಿ ಆದೇಶಿಸಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (2) ರ ದಿನಾಂಕ: 2–8–2010 ರ ಪತ್ರದಲ್ಲಿ, ಸಹಕಾರ ಸಂಘಗಳ ನಿಬಂಧಕರು, ಬೆಂಗಳೂರು ಇವರು ಸರ್ಕಾರದ ದಿನಾಂಕ: 17–12–2009 ರ ಆದೇಶದಂತೆ ಆಡಳಿತಾಧಿಕಾರಿಗಳಾದ ಸಹಕಾರ ಸಂಘಗಳ ಉಪ ನಿಬಂಧಕರು, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ರವರು ನಂದಿನಿ ಲೇಔಟ್ ಪರಿಸರ ಸಂರಕ್ಷಣಾ ಸಂಘ(ರಿ), ಬೆಂಗಳೂರು ಈ ಸಂಘದ ಅಧಿಕಾರ ವಹಿಸಿಕೊಂಡು, ಸಂಘದ ಆಡಳಿತ ಮಂಡಳಿ ಆಯ್ಕೆ ಬಗ್ಗೆ ಚುನಾವಣೆ ನಡೆಸಲು ಕಾರ್ಯಪ್ರವೃತ್ತರಾಗಿರುವುದಾಗಿ ಹಾಗೂ ಏತನ್ಮಧ್ಯೆ ಸಂಘದ ಸದಸ್ಯರುಗಳಿಗೆ ಚುನಾವಣಾ ಸಂಬಂಧ ಆಕ್ಷೇಪಣೆಗಳು ಬರುತ್ತಿರುವುದರಿಂದ ಚುನಾವಣೆಯನ್ನು ಆಡಳಿತಾಧಿಕಾರಿಗಳ ಮೊದಲ ಅವಧಿ ಮುಗಿಯುವುದರೊಳಗಾಗಿ ಪೂರ್ಣಗೊಳಿಸಲು ಸಾಧ್ಯವಾಗುತ್ತಿಲ್ಲವೆಂಬ ಕಾರಣದಿಂದ ಮುಂದಿನ ಆರು ತಿಂಗಳವರೆಗೆ ಆಡಳಿತಾಧಿಕಾರಿಗಳ ಅವಧಿ ವಿಸ್ತರಿಸಲು ಕೋರಿದ್ದು, ಆಡಳಿತಾಧಿಕಾರಿಗಳ ಕೋರಿಕೆಯು ಸಮಂಜಸವಾಗಿದ್ದು, ಅವಧಿಯನ್ನು ಮುಂದಿನ ಆರು ತಿಂಗಳ ಅವಧಿಗೆ ವಿಸ್ತರಿಸಬಹುದು ಎಂಬ ಅಭಿಪ್ರಾಯದೊಂದಿಗೆ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಮುಂದಿನ ಕ್ರಮಕ್ಕಾಗಿ ಕಳುಹಿಸಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಇ 104 ಸಸಂನೋ 2009, ಬೆಂಗಳೂರು ದಿನಾಂಕ : 7–9–2010**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ನಂದಿನಿ ಲೇಔಟ್ ಪರಿಸರ ಸಂರಕ್ಷಣಾ ಸಂಘ(ರಿ), ಬೆಂಗಳೂರು ಈ ಸಂಘಕ್ಕೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ಕಲಂ 27 ಎ ಪ್ರಕಾರ ನೇಮಿಸಲಾಗಿರುವ ಆಡಳಿತಾಧಿಕಾರಿಯಾದ ಸಹಕಾರ ಸಂಘಗಳ ಉಪ ನಿಬಂಧಕರು, ಬೆಂಗಳೂರು ಇವರ ಅವಧಿಯನ್ನು ದಿನಾಂಕ: 16–6–2010 ರಿಂದ 6 ತಿಂಗಳ ಅವಧಿಗೆ ವಿಸ್ತರಿಸಿ ಆದೇಶಿಸಿದೆ.

ಆಡಳಿತಾಧಿಕಾರಿಗಳು ಈ ಅವಧಿಯಲ್ಲಿ ಸಂಸ್ಥೆಗೆ ಚುನಾವಣೆಯನ್ನು ನಡೆಸಿ, ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವಂತೆಯೂ ಸಹ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ನಂಜುಂಡಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಹಕಾರ ಇಲಾಖೆ.

ಪಿ.ಆರ್. 2406

## INFORMATION TECHNOLOGY AND BIOTECHNOLOGY SECRETARIAT

**Sub :** Approval of change of name from M/s ETL Infrastructure Services Ltd. To M/s. Indian Green Grid Group Ltd to extablish "IT PARK WITH DISASTER RECOVERY FACILITY CENTER", at Devanahalli Taluk, Bangalore Rural District.

**Read :** 1. G.O.No.ITD 33 MDA 2009 Dt: 2.12.2009.

2. Proceedings of the 22nd State High Level Clearance Committee (SHLCC) meeting held on 24-5-2010.

**PREAMBLE :**

In the Government Order read at 1 above Government were pleased to accord approval to M/s. ETL infrastructure Services Ltd, to extablish "IT Park With Disaster Recovery Facility Centre" in 15 acres of own land at Akkalenahalli and Mallenahalli Villages of Kasaba Hobli, Devanahalli Taluk, Bangalore Rural District, as approved in the 19th SHLCC meeting held on 31.8.2009.

In the 22nd SHLCC meeting held on 24.5.2010 under the Chairmanship of Hon'ble Chief Minister of Karnataka, the Company has requested for the change of name to "M/s. Indian Green Grid Group Ltd", submitting the copy of fresh certificate of incorporation issued by the Registrar of Companies, Chennai. The Committee noted the request of the Company and approved the change in name.

Hence the following order:

**GOVERNMENT ORDER NO : ITD: 22 MDA: -2010, BANGALORE, DATED : 13.9.2010.**

In the circumstances explained in the Preamble, Government, in partial modification of the Government Order read at (1) above, are pleased to accord approval for change in name of the Company from M/s ETL Infrastructure Services Ltd. to M/s. Indian Green Grid Group Ltd.

There are no changes in respect of other items.

By Order and in the name of the Governor of Karnataka

**M.V. Krishnamurthy**

Under Secretary to Government

Dept. of Information Technology

And Biotechnology.

P.R. 2407

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ :** ಇಲಾಖಾ ತಾಂತ್ರಿಕ ಸಲಹಾ ಸಮಿತಿಯ (TAP) ತಾಂತ್ರಿಕ ಸದಸ್ಯರ ಬದಲಾವಣೆಯ ಬಗ್ಗೆ.

**ಓದಲಾಗಿದೆ :** (1) ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಇ–ಆಡಳಿತ) ಇವರ ಅನಧಿಕೃತ ಟಿಪ್ಪಣಿ ಸಂಖ್ಯೆ: ಸಿಆಸುಇ/134/ವಿಮಾಆ/2009 ದಿನಾಂಕ: 09–08–2010.

(2) ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ, ಇವರ ಪತ್ರ ಸಂಖ್ಯೆ: ಮಾತಂಮತ್ತುಜೈತಂನಿ/ಎಸ್ಎ/TAP-ಪುರ/04/503/2010–11 ದಿನಾಂಕ: 23–08–2010,

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ: 09–08–2010ರ ಅನಧಿಕೃತ ಟಿಪ್ಪಣಿಯಲ್ಲಿ ಹೊಸ ತಾಂತ್ರಿಕ ತಜ್ಞರೊಳಗೊಂಡಂತೆ ತಾಂತ್ರಿಕ ಸಲಹಾ ಸಮಿತಿಯನ್ನು ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 134 ವಿಮಾಆ 2009 ಬೆಂಗಳೂರು, ದಿನಾಂಕ: 19ನೇ ಜುಲೈ 2010ರ ಪ್ರಕಾರ ಪುನರ್‌ರಚಿಸಲು ಕ್ರಮ ಕೈಗೊಳ್ಳುವಂತೆ ಕೋರಲಾಗಿದೆ. ಸಿ.ಆ.ಸು (ಇ–ಆಡಳಿತ) ಇಲಾಖೆಯ ಸದರಿ ಸರ್ಕಾರಿ ಆದೇಶದಲ್ಲಿ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಗೆ ಸಂಬಂಧಪಟ್ಟಂತೆ ಈ ಕೆಳಕಂಡ ಸದಸ್ಯರುಗಳು ಒಳಗೊಂಡಂತೆ ಹಾರ್ಡ್‌ವೇರ್ ಹಾಗೂ ಸಾಫ್ಟ್ ವೇರ್, ಇತರ ಪರಿಕರ ಮತ್ತು ಸೇವೆಗಳನ್ನು ಪಡೆಯುವ ಸಲುವಾಗಿ ಹಾಗೂ ಈ ಬಗ್ಗೆ ಸೂಕ್ತ ಮಾರ್ಗದರ್ಶನ ನೀಡಲು ತಾಂತ್ರಿಕ ಸಲಹಾ ಸಮಿತಿಯನ್ನು ಪುನರ್ ರಚಿಸಬೇಕೆಂದು ಸೂಚಿಸಲಾಗಿದೆ.

1) ಶೀ ಗಂಗಾಧರ್ ಎನ್. ದಾಟನಾಳ್, ಸೀನಿಯರ್ ಪ್ರೋಗ್ರಾಮರ್, (ಇ–ಆಡಳಿತ)
2) ಪ್ರೊ. ರಾಜೇಂದ್ರ ಕೆ. ಬಂಡಿ,
3) ಪ್ರೊ. ಬಾಲಾಜಿ ಪಾರ್ಥಸಾರಥಿ,

ಮೇಲೆ (2)ರಲ್ಲಿ ಓದಲಾದ ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ, ಇವರ ದಿನಾಂಕ: 23–08–2010ರ ಪತ್ರದಲ್ಲಿ, ಈ ಕೆಳಕಂಡ ಸದಸ್ಯರನ್ನು ಒಳಗೊಂಡಂತೆ ಮಾತಂ, ಜೈತಂ ಹಾಗೂ ವಿತಂ ಇಲಾಖೆಗೆ ತಾಂತ್ರಿಕ ಸಲಹಾ ಸಮಿತಿಯನ್ನು ರಚಿಸಲು ಆದೇಶ ಹೊರಡಿಸಿ ಪ್ರಸ್ತಾಪಿಸಲಾಗಿದೆ.

| | | |
|---|---|---|
| 1) | ಸರ್ಕಾರದ ಪ್ರಧಾನ ಕಾರ್ಯದಶಿಗಳು ಮಾತಂ, ಜೈತಂ ಹಾಗೂ ವಿತಂ ಇಲಾಖೆ | ಅಧ್ಯಕ್ಷರು |
| 2) | ತಾಂತ್ರಿಕ ಸದಸ್ಯರುಗಳು, ಇ–ಆಡಳಿತ ಇಲಾಖೆಯಿಂದ ನಾಮ ನಿರ್ದೇಶನಗೊಂಡಂತೆ | ಸದಸ್ಯರು |
| 3) | ಅಧಿಕೃತ ಪ್ರತಿನಿಧಿ, ಎನ್ಐಸಿ, ಬೆಂಗಳೂರು | ಸದಸ್ಯರು |
| 4) | ಅಧಿಕೃತ ಪ್ರತಿನಿಧಿ, ಆರ್ಥಿಕ ಇಲಾಖೆ | ಸದಸ್ಯರು |
| 5) | ಅಧಿಕೃತ ಪ್ರತಿನಿಧಿ, ಯೋಜನಾ ಇಲಾಖೆ | ಸದಸ್ಯರು |
| 6) | ನಿರ್ದೇಶಕರು, ಮಾತಂ, ಜೈತಂ ನಿರ್ದೇಶನಾಲಯ | ಸದಸ್ಯರು ಹಾಗೂ ಸಮಾವೇಶಕರು |

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಮಾತಂಇ 94 ಎಡಿಎಂ 2010, ಬೆಂಗಳೂರು, ದಿನಾಂಕ : 13–09–2010.**

ಪ್ರಸ್ತಾವನೆಯಲ್ಲಿ ಹೇಳಿದ ಸಂದರ್ಭದಲ್ಲಿ ಈ ಕೆಳಕಂಡ ಸದಸ್ಯರನ್ನು ಒಳಗೊಂಡಂತೆ ಮಾತಂ, ಜೈತಂ ಹಾಗೂ ವಿತಂ ಇಲಾಖೆ ತಾಂತ್ರಿಕ ಸಲಹಾ ಸಮಿತಿಯನ್ನು ರಚಿಸಲಾಗಿದೆ.

| | | |
|---|---|---|
| 1) | ಸರ್ಕಾರದ ಪ್ರಧಾನ ಕಾರ್ಯದಶಿಗಳು<br>ಮಾತಂ, ಜೈತಂ ಹಾಗೂ ವಿತಂ ಇಲಾಖೆ | ಅಧ್ಯಕ್ಷರು |
| 2) | ಶ್ರೀ ಗಂಗಾಧರ್ ಎನ್. ದಾಟನಾಳ್, ಸೀನಿಯರ್ ಪ್ರೋಗ್ರಾಮರ್,<br>(ಇ–ಆಡಳಿತ ಇಲಾಖೆ) | ಸದಸ್ಯರು |
| 3) | ಪ್ರೊ. ರಾಜೇಂದ್ರ ಕೆ. ಬಂಡಿ,<br>ಇಂಡಿಯನ್ ಇನ್ಸ್ಟಿಟ್ಯೂಟ್ ಆಫ್ ಮ್ಯಾನೇಜ್ ಮೆಂಟ್<br>ಬನ್ನೇರುಘಟ್ಟ ರಸ್ತೆ, ಬೆಂಗಳೂರು–560076 | ಸದಸ್ಯರು |
| 4) | ಪ್ರೊ. ಬಾಲಾಜಿ ಪಾರ್ಥಸಾರಥಿ<br>ಐಐಐಟಿ ಎಲೆಕ್ಟ್ರಾನಿಕ್ ಸಿಟಿ ಬೆಂಗಳೂರು–560100 | ಸದಸ್ಯರು |
| 5) | ಅಧಿಕೃತ ಪ್ರತಿನಿಧಿ, ಎನ್ಐಸಿ, ಬೆಂಗಳೂರು | ಸದಸ್ಯರು |
| 6) | ಅಧಿಕೃತ ಪ್ರತಿನಿಧಿ, ಆರ್ಥಿಕ ಇಲಾಖೆ | ಸದಸ್ಯರು |
| 7) | ಅಧಿಕೃತ ಪ್ರತಿನಿಧಿ, ಯೋಜನಾ ಇಲಾಖೆ | ಸದಸ್ಯರು |
| 8) | ನಿರ್ದೇಶಕರು, ಮಾತಂ, ಜೈತಂ ನಿರ್ದೇಶನಾಲಯ | ಸದಸ್ಯರು ಹಾಗೂ<br>ಸಮಾವೇಶಕರು |
| 9) | ಸರ್ಕಾರದ ಉಪ ಕಾರ್ಯದರ್ಶಿಗಳು (ಮಾತಂ, ಜೈತಂ)<br>ಮಾತಂ, ಜೈತಂ ಹಾಗೂ ವಿತಂ ಇಲಾಖೆ | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ವಿ.ಕೃಷ್ಣಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ

ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ.

ಪಿ.ಆರ್. 2408

## ಒಳಾಡಳಿತ ಸಚಿವಾಲಯ

**ವಿಷಯ :** 1872ರ ಭಾರತೀಯ ಕ್ರಿಶ್ಚಿಯನ್ ಕಾಯಿದೆಯ ಕಲಂ 9 ಮತ್ತು ಕಲಂ 7ರ ಅಡಿಯಲ್ಲಿನ ಪ್ರಸ್ತಾವನೆಗಳ ಕುರಿತು – ಅಧಿಕಾರ ಪ್ರತ್ಯಾಯೋಜನೆ ಬಗ್ಗೆ.

**ಓದಲಾಗಿದೆ :** 1) ಮಾನ್ಯ ಗೃಹ ಸಚಿವರ ಆದೇಶ ಸಂಖ್ಯೆ ಹೆಚ್ಎಂ/ಎಫ್ /1053/2010 ದಿನಾಂಕ: 28/08/2010.

**ಪ್ರಸ್ತಾವನೆ :**

1872ರ ಭಾರತೀಯ ಕ್ರಿಶ್ಚಿಯನ್ ಕಾಯಿದೆಯ ಕಲಂ 7ರ ರೀತ್ಯ ಯಾವುದೇ ಜಿಲ್ಲಾ ಆಡಳಿತ ವ್ಯಾಪ್ತಿಗೆ ಸೀಮಿತಗೊಳಿಸಿ ಕ್ರಿಶ್ಚಿಯನ್ನರನ್ನು ವಿವಾಹ ನೋಂದಣಾಧಿಕಾರಿಯಾಗಿ ನೇಮಿಸುವ ಹಾಗೂ ಸದರಿ ಕಾಯಿದೆ ಕಲಂ 9ರ ಪ್ರಕಾರ ಕ್ರಿಶ್ಚಿಯನ್ನರ ನಡುವಿನ ವಿವಾಹ ಸಂಬಂಧದಲ್ಲಿ ವಿವಾಹ ಪ್ರಮಾಣ ಪತ್ರಗಳನ್ನು ನೀಡಲು ಲೈಸನ್ಸ್ ಮಂಜೂರಾತಿ ಕುರಿತು ರಾಜ್ಯ ಸರ್ಕಾರಕ್ಕೆ ಅಧಿಕಾರವಿರುತ್ತದೆ.

ಅದರಂತೆ, ಪ್ರಸ್ತುತ, ಸದರಿ ಕಾಯಿದೆಯಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಮಾನ್ಯ ಗೃಹ ಸಚಿವರು ಚಲಾಯಿಸಿ, ಅದರಲ್ಲಿ ಸೂಚಿಸಿರುವ ಷರತ್ತುಗಳನ್ನು ಪೂರೈಸುವ ಷರತ್ತಿಗೊಳಪಟ್ಟು, ಅನುಕ್ರಮವಾಗಿ ವಿವಾಹ ನೊಂದಣಾಧಿಕಾರಿಯಾಗಿ ನೇಮಿಸಲು ಮತ್ತು ವಿವಾಹ ಲೈಸನ್ಸ್ ಮಂಜೂರು ಮಾಡಲು ಅನುಮೋದನೆಯನ್ನು ನೀಡುತ್ತಿದ್ದಾರೆ.

ಆದರೆ, ಮಾನ್ಯ ಗೃಹ ಸಚಿವರು ಮೇಲೆ ಓದಲಾದ ತಮ್ಮ ಆದೇಶದಲ್ಲಿ, ಈ ಅಧಿಕಾರವನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಒಳಾಡಳಿತ ಇಲಾಖೆ ಇವರಿಗೆ ಪ್ರತ್ಯಾಯೋಜಿಸಲು ಆದೇಶಿಸಿರುತ್ತಾರೆ. ಅದರಂತೆ, ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:ಹೆಚ್‌ಡಿ 479 ಪಿಎಂಎಸ್ 2010, ಬೆಂಗಳೂರು, ದಿನಾಂಕ: 09/09/2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ಸರ್ಕಾರಿ (ವ್ಯವಹಾರಗಳ ನಿರ್ವಹಣೆ) ನಿಯಮಗಳು 1977ರ ನಿಯಮ 6ರ ಉಪ ನಿಯಮ (2) ಅನ್ನು ನಿಯಮ 30ರ ಉಪ ನಿಯಮ(2)ರೊಂದಿಗೆ ಓದಲಾದಂತೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮಾನ್ಯ ಗೃಹ ಸಚಿವರು, ಕರ್ನಾಟಕ ಸರ್ಕಾರ ಇವರು 1872ರ ಭಾರತೀಯ ಕ್ರಿಶ್ಚಿಯನ್ ಕಾಯಿದೆಯ ಕಲಂ 7ರ ರೀತ್ಯ ಯಾವುದೇ ಜಿಲ್ಲಾ ಆಡಳಿತ ವ್ಯಾಪ್ತಿಗೆ ಸೀಮಿತಗೊಳಿಸಿ ಕ್ರಿಶ್ಚಿಯನ್ನರನ್ನು ವಿವಾಹ ನೋಂದಣಾಧಿಕಾರಿಯಾಗಿ ನೇಮಿಸುವ ಹಾಗೂ ಸದರಿ ಕಾಯಿದೆ ಕಲಂ 9ರ ಪ್ರಕಾರ ಕ್ರಿಶ್ಚಿಯನ್ನರ ನಡುವಿನ ವಿವಾಹ ಸಂಬಂಧದಲ್ಲಿ ವಿವಾಹ ಪ್ರಮಾಣ ಪತ್ರಗಳನ್ನು ನೀಡಲು ಲೈಸನ್ಸ್ ಮಂಜೂರಾತಿ ಕುರಿತು ಅನುಮೋದನೆ ನೀಡುವ ಅಧಿಕಾರವನ್ನು ಈ ಮೂಲಕ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಒಳಾಡಳಿತ ಇಲಾಖೆ ಇವರಿಗೆ ಪ್ರತ್ಯಾಯೋಜಿಸಿದ್ದಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆಲಿಸ್ ಗೊನ್ಸಾಲ್ವಿಸ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ,

(ರಹದಾರಿ ಮತ್ತು ವಿದೇಶಿಯರು)

ಪಿ.ಆರ್. 2409

## ಕಂದಾಯ ಸಚಿವಾಲಯ

## ಸುತ್ತೋಲೆ

**ಸಂಖ್ಯೆ: ಕಂಇ 69 ಭೂಸ್ವಾಬೆ 2009 ಬೆಂಗಳೂರು, ದಿನಾಂಕ: 04–09–2010**

**ವಿಷಯ** : ಭೂಸ್ವಾಧೀನ ಪ್ರಕರಣಗಳಲ್ಲಿ ಪರಿಹಾರದ ಹಣದಿಂದ ಆದಾಯ ತೆರಿಗೆಯನ್ನು ಕಟಾಯಿಸುವ ಬಗ್ಗೆ ಸೂಚನೆಗಳು.

**ಉಲ್ಲೇಖ** : 1) ಸರ್ಕಾರದ ಸುತ್ತೋಲೆ ಸಂಖ್ಯೆ ಆರ್‌ಡಿ 28 ಎಕ್ಯೂಡಬ್ಲ್ಯೂ 2001 ದಿನಾಂಕ: 29–12–2001.

2) ಸರ್ಕಾರದ ಸುತ್ತೋಲೆ ಸಂಖ್ಯೆ ಕಂಇ 02 ಭೂಸ್ವಾಧಾ 2008 ದಿನಾಂಕ: 20–5–2008.

3) ಆದಾಯ ತೆರಿಗೆ ಆಯುಕ್ತರು, (ಟಿಡಿಎಸ್) ಬೆಂಗಳೂರು ಇವರ ಪತ್ರ ಸಂಖ್ಯೆ ಎಫ್‌ನಂ.2ಎ ಸಿಐಟಿ (ಟಿಡಿಎಸ್) 2009–10 ದಿ: 19–5–2009.

4) ರಾಜ್ಯ ಉಚ್ಚ ನ್ಯಾಯಾಲಯವು ಐಟಿಎ ಪ್ರಕರಣ ಸಂಖ್ಯೆ 243/2006ರಲ್ಲಿ ದಿನಾಂಕ: 22–10–2009ರಂದು ನೀಡಿರುವ ಆದೇಶ.

5) ಆದಾಯ ತೆರಿಗೆ ಆಯುಕ್ತರು (ಟಿಡಿಎಸ್)ಬೆಂಗಳೂರು ಇವರ ಪತ್ರ ಸಂಖ್ಯೆ ಎಫ್ ನಂ.2ಎ/ಸಿಐಟಿ (ಟಿಡಿಎಸ್)2009–10 ದಿನಾಂಕ: 2–3–2010.

ಕ್ರಮ ಸಂಖ್ಯೆ 1 ರ ಸುತ್ತೋಲೆಯಲ್ಲಿ ಭೂಸ್ವಾಧೀನ ಪ್ರಕರಣಗಳಲ್ಲಿ ಭೂ ಪರಿಹಾರದ ಮೊತ್ತದ ಮೇಲೆ ಪಾವತಿಸಲಾಗುವ ಬಡ್ಡಿ ಹಣದ ಮೇಲೆ ಆದಾಯ ತೆರಿಗೆ ಕಾಯ್ದೆಯ ಕಲಂ 194–ಎ ರ ಪ್ರಕಾರ ತೆರಿಗೆಯನ್ನು ಮೂಲದಲ್ಲಿಯೇ ಕಟಾಯಿಸುವಂತೆ ಸೂಚನೆಗಳನ್ನು ನೀಡಲಾಗಿರುತ್ತದೆ.

ಸರ್ವೋಚ್ಚ ನ್ಯಾಯಾಲಯವು ಬಿಕ್ರಮ್‌ಸಿಂಗ್ ಮತ್ತು ಇತರರು ಹಾಗೂ ಭೂಸ್ವಾಧೀನಾಧಿಕಾರಿ ಹಾಗೂ ಇತರರ ಪ್ರಕರಣದಲ್ಲಿ (1996) ಎಲ್‌ಎಸಿಸಿ 618) ತೀರ್ಪು ನೀಡಿ ಆದಾಯ ತೆರಿಗೆ ಕಾಯ್ದೆ ಕಲಂ 2(28ಎ)ರಲ್ಲಿ ಬಡ್ಡಿಯ ವ್ಯಾಖ್ಯಾನವನ್ನು ತಿದ್ದುಪಡಿ ಮಾಡಿರುವ ಮೇರೆಗೆ, ಭೂಸ್ವಾಧೀನ ಪ್ರಕರಣಗಳಲ್ಲಿ ಭೂಸ್ವಾಧೀನ ಕಾಯ್ದೆ ಕಲಂ 28 ಅಥವಾ 34ರ ಪ್ರಕಾರ ವಿಳಂಬವಾಗಿ ಪಾವತಿಸುವ ಪರಿಹಾರದ ಮೊತ್ತದ ಮೇಲಿನ ಬಡ್ಡಿಯು ಆದಾಯ ತೆರಿಗೆ ಕಾಯ್ದೆಯ ಕಲಂ 4ರ ವ್ಯಾಪ್ತಿಗೆ ಬರುತ್ತದೆಂದು ಇದರಿಂದ ಕಲಂ 194–ಎ ಇಂತಹ ಪ್ರಕರಣಗಳಲ್ಲಿ ಅನ್ವಯಿಸುವುದಿಲ್ಲವೆಂದು ಆದೇಶಿಸಿದೆ. ರಾಜ್ಯ ಉಚ್ಚ ನ್ಯಾಯಾಲಯವು ಸಹ ರಿಟ್ ಅರ್ಜಿ ಸಂಖ್ಯೆ:8517/2007ರಲ್ಲಿ ದಿನಾಂಕ: 4–7–2007ರಂದು ನೀಡಿದ ಆದೇಶದಲ್ಲಿ ಈ ಅಂಶವನ್ನು ಪುಷ್ಟೀಕರಿಸಿರುತ್ತದೆ.

ಅದರಂತೆ ಕ್ರಮ ಸಂಖ್ಯೆ 2ರ ಸುತ್ತೋಲೆಯಲ್ಲಿ ಭೂಸ್ವಾಧೀನ ಪ್ರಕರಣಗಳಲ್ಲಿ ಭೂಮಾಲೀಕರಿಗೆ ವಿಳಂಬವಾಗಿ ಪಾವತಿಸುವ ಪರಿಹಾರ ಮೊತ್ತದ ಮೇಲೆ ಭೂಸ್ವಾಧೀನ ಕಾಯ್ದೆಯ ಕಲಂ 28 ಅಥವಾ 34ರ ಅಡಿಯಲ್ಲಿ ಬಡ್ಡಿ ಹಣವನ್ನು ವಿತರಿಸುವಾಗ ಮೂಲದಲ್ಲಿಯೇ ಆದಾಯ ತೆರಿಗೆಯನ್ನು ಕಟಾಯಿಸಿಕೊಳ್ಳುವಂತಿಲ್ಲ. ಈ ಸಂಬಂಧದಲ್ಲಿ ನಿಯಮಾನುಸಾರ ಪಾವತಿಸಬೇಕಾದ ಆದಾಯ ತೆರಿಗೆಯನ್ನು ತೆರಿಗೆದಾರನೇ ನೇರವಾಗಿ ಪಾವತಿಸಬಹುದಾ–ಗಿದೆಯೆಂದು ಸುತ್ತೋಲೆಯನ್ನು ಹೊರಡಿಸಲಾಗಿರುತ್ತದೆ.

ಉಲ್ಲೇಖ 3ರ ಪತ್ರದಲ್ಲಿ ಆದಾಯ ತೆರಿಗೆ ಕಾಯ್ದೆ 1961ರ ಕಲಂ 194–ಎ ರಡಿಯಲ್ಲಿ ನೀಡಿರುವ ಸ್ಪಷ್ಟೀಕರಣವು ತಪ್ಪಾಗಿರುತ್ತದೆಯೆಂದು, ಈ ಕಾಯ್ದೆ ಅನ್ವಯ ಭೂಸ್ವಾಧೀನ ಪ್ರಕರಣಗಳಲ್ಲಿ ಬಡ್ಡಿಯನ್ನು ಪಾವತಿಸುವ ಪ್ರಾಧಿಕಾರವು ಮೂಲದಲ್ಲಿಯೇ ಆದಾಯ ತೆರಿಗೆಯನ್ನು ಕಟಾಯಿಸಿ ಸರ್ಕಾರಕ್ಕೆ ಜಮಾ ಮಾಡಬೇಕಾಗಿರುತ್ತದೆ ಎಂದು ಆದಾಯ ತೆರಿಗೆ ಆಯುಕ್ತರು ತಿಳಿಸಿರುತ್ತಾರೆ. ಅದರಂತೆ ಸುತ್ತೋಲೆಯನ್ನು ಹಿಂತೆಗೆದುಕೊಂಡು ಸಂಬಂಧಪಟ್ಟವರಿಗೆ ಸ್ಪಷ್ಟೀಕರಣ ನೀಡುವಂತೆ ತಿಳಿಸಿರುತ್ತಾರೆ.

ದಿನಾಂಕ: 20–5–2008ರ ಸುತ್ತೋಲೆಯನ್ನು ಹೊರಡಿಸುವ ಪೂರ್ವದಲ್ಲಿ ಕಾನೂನು ಇಲಾಖೆಯ ಅಭಿಪ್ರಾಯವನ್ನು ಪಡೆಯಲಾಗಿರುತ್ತದೆ ಅಲ್ಲದೆ ಆದಾಯ ತೆರಿಗೆ ಅಧಿಕಾರಿಗಳು ದಿನಾಂಕ: 19–5–2009ರಂದು ಸ್ಪಷ್ಟೀಕರಣ ನೀಡುವ ಕುರಿತು ಪತ್ರ ಬರೆದ ನಂತರವೂ ಸುತ್ತೋಲೆಯನ್ನು ಹಿಂದಕ್ಕೆ ಪಡೆಯುವ ಕುರಿತು ಕಾನೂನು ಇಲಾಖೆಯೊಂದಿಗೆ ಸಮಾಲೋಚಿಸಲಾಗಿರುತ್ತದೆ. ಆದರೆ, ಕಾನೂನು ಇಲಾಖೆಯು ದಿನಾಂಕ: 20–5–2008ರ ಸುತ್ತೋಲೆಯಲ್ಲಿ ಸರ್ವೋಚ್ಚ ನ್ಯಾಯಾಲಯವು ಮತ್ತು ಉಚ್ಚ ನ್ಯಾಯಾಲಯವು ನೀಡಿರುವ ತೀರ್ಪುಗಳ ಅನ್ವಯ ನಿರ್ದೇಶನ ನೀಡಿರುವುದು ಸರಿಯಿದೆಯೆಂದು ಹಾಗೂ ಸುತ್ತೋಲೆಯನ್ನು ಹಿಂಪಡೆಯುವ ಅವಶ್ಯಕತೆ ಇಲ್ಲವೆಂದು ಅಭಿಪ್ರಾಯ ನೀಡಿರುತ್ತದೆ.

ತದನಂತರ ಉಲ್ಲೇಖ 4ರ ರಾಜ್ಯ ಉಚ್ಚ ನ್ಯಾಯಾಲಯದ ಆದೇಶವನ್ನು ಪ್ರಸ್ತಾಪಿಸಿ ನ್ಯಾಯಾಲಯದ ಆದೇಶವನ್ನು ಜಾರಿಗೊಳಿಸುವಂತೆ ಹಾಗೂ ಸುತ್ತೋಲೆಯನ್ನು ಹಿಂದಕ್ಕೆ ಪಡೆದು ಬಾಕಿ ಇರುವ ಆದಾಯ ತೆರಿಗೆಯನ್ನು ಲೆಕ್ಕ ಹಾಕಿ ಆದಾಯ ತೆರಿಗೆ ಇಲಾಖೆಗೆ ಪಾವತಿಸುವಂತೆ ಉಲ್ಲೇಖ 5ರ ಪತ್ರದಲ್ಲಿ ಆದಾಯ ತೆರಿಗೆ ಆಯುಕ್ತರು ತಿಳಿಸಿರುತ್ತಾರೆ.

ಈ ವಿಷಯದಲ್ಲಿ ಕಾನೂನು ಇಲಾಖೆಯನ್ನು ಮೊತ್ತೊಮ್ಮೆ ಸಂಪರ್ಕಿಸಲಾಗಿದ್ದು ರಾಜ್ಯ ಉಚ್ಚ ನ್ಯಾಯಾಲಯವು ಆದಾಯ ತೆರಿಗೆ ಕಾಯ್ದೆ 1961ರ ಕಲಂ 194–ಎರ ಬಗ್ಗೆ ನೀಡಿರುವ ನಿರ್ದೇಶನದ ಹಿನ್ನೆಲೆಯಲ್ಲಿ ಭೂಸ್ವಾಧೀನ ಪ್ರಕರಣಗಳಲ್ಲಿ ವಿಳಂಬವಾಗಿ ಪಾವತಿಸುವ ಪರಿಹಾರದನದ ಬಡ್ಡಿ ಮೇಲೆ ಆದಾಯ ತೆರಿಗೆಯನ್ನು ಕಟಾಯಿಸುವುದು ಸಂಭಂಧಪಟ್ಟ ಅಧಿಕಾರಿಗಳ ಕರ್ತವ್ಯವಾಗಿರುತ್ತದೆಯೆಂದು ತಿಳಿಸಿ, ಸುತ್ತೋಲೆಯನ್ನು ಹಿಂಪಡೆಯಲು ಅಭಿಪ್ರಾಯವನ್ನು ನೀಡಿರುತ್ತಾರೆ.

ಈ ಹಿನ್ನೆಲೆಯಲ್ಲಿ ಭೂಸ್ವಾಧೀನ ಪ್ರಕರಣಗಳಲ್ಲಿ ಭೂಮಾಲೀಕರಿಗೆ ವಿಳಂಬವಾಗಿ ಪಾವತಿಸುವ ಪರಿಹಾರ ಮೊತ್ತದ ಮೇಲೆ ಭೂಸ್ವಾಧೀನ ಕಾಯ್ದೆಯ ಕಲಂ 28 ಅಥವಾ 34ರ ಅಡಿಯಲ್ಲಿ ಬಡ್ಡಿ ಹಣವನ್ನು ವಿತರಿಸುವಾಗ ಮೂಲದಲ್ಲಿಯೇ ಆದಾಯ ತೆರಿಗೆಯನ್ನು ಕಟಾಯಿಸುವಂತೆ ಸೂಚಿಸಲಾಗಿದೆ.

ಈ ಸಂಬಂಧದಲ್ಲಿ ಹೊರಡಿಸಲಾಗಿದ್ದ ದಿನಾಂಕ: 20–5–2008ರ ಸುತ್ತೋಲೆ ಸಂಖ್ಯೆ ಕಂಇ 02 ಭೂಸ್ವಾಧಾ 2008ನ್ನು ಈ ಮೂಲಕ ಹಿಂದಕ್ಕೆ ಪಡೆಯಲಾಗಿದೆ. ಈ ಸುತ್ತೋಲೆಯನ್ನು ಹೊರಡಿಸದಿದ್ದಲ್ಲಿ ಕಟಾಯಿಸಬೇಕಾಗಿದ್ದ ಆದಾಯ ತೆರಿಗೆಯನ್ನು ಲೆಕ್ಕ ಹಾಕಿ ಅದನ್ನು ಸಂಬಂಧಪಟ್ಟವರಿಂದ ವಸೂಲಿ ಮಾಡಿ ಆದಾಯ ತೆರಿಗೆ ಇಲಾಖೆಗೆ ಪಾವತಿಸುವಂತೆ ಈ ಮೂಲಕ ಸೂಚಿಸಲಾಗಿದೆ.

ಈ ಸೂಚನೆಗಳನ್ನು ಕಟ್ಟುನಿಟ್ಟಾಗಿ ಪಾಲಿಸುವಂತೆ ಎಲ್ಲಾ ಜಿಲ್ಲಾಧಿಕಾರಿಗಳಿಗೆ, ಉಪವಿಭಾಗಾಧಿಕಾರಿಗಳಿಗೆ/ ಭೂಸ್ವಾಧೀನಾಧಿಕಾರಿಗಳಿಗೆ ಹಾಗೂ ವಿಶೇಷ ಭೂಸ್ವಾಧೀನಾಧಿಕಾರಿಗಳಿಗೆ ತಿಳಿಸಲಾಗಿದೆ.

**ಎಂ.ವೆಂಕಟೇಶಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ(ಭೂಸ್ವಾ–2)

ಪಿ.ಆರ್.2410

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ :** ರಾಜ್ಯ ಸರ್ಕಾರದ ಉದ್ಯೋಗಸ್ಥ ಮಹಿಳೆಯರ ವಸತಿ ನಿಲಯ ನಿರ್ಮಾಣ ಯೋಜನೆಯನ್ನು ಅನುಷ್ಠಾನಗೊಳಿಸಲು ಆಡಳಿತಾತ್ಮಕ ಅನುಮೋದನೆ ನೀಡುವ ಕುರಿತು.

**ಓದಲಾಗಿದೆ :** ದಿನಾಂಕ: 06.04.2010 ರ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ನಿರ್ದೇಶಕರ ಪತ್ರ ಸಂಖ್ಯೆ: ಮಮಅಇ:ಮಕವಿ:2009–10:61.

**ಪ್ರಸ್ತಾವನೆ :**

2010–11ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಖಾಸಗಿ ಹಾಗೂ ಸ್ವಯಂ ಸೇವಾ ಸಂಸ್ಥೆಗಳು ದುಡಿಯುವ ಮಹಿಳೆಯರಿಗೆ 25 ಕೊಠಡಿಗಳಿರುವ ವಸತಿ ಗೃಹಗಳನ್ನು ಜಿಲ್ಲಾ ಕೇಂದ್ರ ಸ್ಥಳದಲ್ಲಿ ನಿರ್ಮಿಸಲು ಸಂಬಂಧಪಟ್ಟ ಅಭಿವೃದ್ಧಿ ಪ್ರಾಧಿಕಾರಗಳು/ಪಟ್ಟಣ ನಿಗಮಗಳು 10,000 ಚದರ ಅಡಿಯವರೆಗಿನ ನಿವೇಶನವನ್ನು ಮಾರ್ಗಸೂಚಿಯ ಶೇಕಡ 50 ರಷ್ಟು ಮೊತ್ತದಲ್ಲಿ ಒದಗಿಸಲಾಗುವುದೆಂದು ಮತ್ತು ನಿರ್ಮಾಣಕ್ಕೆ ರೂ.25.00 ಲಕ್ಷಗಳನ್ನು ನೀಡಲಾಗುವುದೆಂದು ಹಾಗೂ ಇದಕ್ಕಾಗಿ ರೂ.10.00 ಕೋಟಿ ಆಯವ್ಯಯ ನಿಗದಿಪಡಿಸಲಾಗಿದೆ ಎಂದು ಘೋಷಿಸಲಾಗಿದೆ.

ಆದ್ದರಿಂದ ದುಡಿಯುವ ಮಹಿಳೆಯರ ವಸತಿ ನಿಲಯ ನಿರ್ಮಾಣ ಯೋಜನೆಯನ್ನು ಪ್ರಸ್ತಾವನೆಯೊಂದಿಗೆ ಸಲ್ಲಿಸಲಾದ ಅನುಬಂಧದಲ್ಲಿನ ರೂಪುರೇಷೆಗಳನ್ವಯ ಜಿಲ್ಲಾ ಮಟ್ಟದಲ್ಲಿ ಅನುಷ್ಠಾನಗೊಳಿಸಲು ಆದೇಶ ಹೊರಡಿಸುವಂತೆ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ನಿರ್ದೇಶಕರು ಮೇಲೆ ಓದಲಾದ ಪತ್ರದಲ್ಲಿ ಕೋರಿರುತ್ತಾರೆ.

ಸದರಿ ಪ್ರಸ್ತಾವನೆ ಬಗ್ಗೆ ಆರ್ಥಿಕ ಇಲಾಖೆ ಮತ್ತು ಯೋಜನಾ ಇಲಾಖೆಯೊಂದಿಗೆ ಸಮಾಲೋಚಿಸಲಾಗಿದೆ.

**ಆದೇಶ ಸಂಖ್ಯೆ : ಮಮಇ:67 ಮಭಾಬ 2010, ಬೆಂಗಳೂರು, ದಿನಾಂಕ : 09.09.2010.**

ಮೇಲಿನ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ದುಡಿಯುವ ಮಹಿಳೆಯರ ವಸತಿ ನಿಲಯ ನಿರ್ಮಾಣದ ಯೋಜನೆಯನ್ನು ಅನುಬಂಧದಲ್ಲಿ ಸೂಚಿಸಿರುವ ಮಾರ್ಗಸೂಚಿಗಳನ್ವಯ ಈ ಕೆಳಕಂಡ ಷರತ್ತುಗಳೊಂದಿಗೆ ಅನುಷ್ಠಾನಗೊಳಿಸಲು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ನಿರ್ದೇಶಕರಿಗೆ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

1) ವಸತಿ ನಿಲಯಗಳನ್ನು ಮಂಜೂರು ಮಾಡುವಾಗ ಅವಶ್ಯಕತೆಯ ಸಮೀಕ್ಷೆಗನುಗುಣವಾಗಿ ಮಂಜೂರು ಮಾಡುವುದು.
2) ಮೂರು ವರ್ಷಗಳ ನಂತರ ಸದರಿ ಯೋಜನೆಯನ್ನು ಮೌಲ್ಯಮಾಪನ ಮಾಡುವುದು.
3) ಮೇಲ್ವಿಚಾರಣೆಯ ಉಸ್ತುವಾರಿಯನ್ನು ನಿರ್ಧರಿಸುವಾಗ (Monitoring Mechanism) ಸ್ಪಷ್ಟ ಮತ್ತು ಅಳತೆ ಮಾಡಬಲ್ಲ ಯಶಸ್ಸಿನ ಆಧಾರದ ಮೇಲೆ ಮಾಡತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಎಫ್‌ಡಿ 291 ಇಎಕ್ಸ್‌ಪಿ 3/10, ದಿನಾಂಕ: 13–05–2010 ಮತ್ತು ಯೋಜನಾ ಇಲಾಖೆಯ ಟಿಪ್ಪಣಿ ಸಂಖ್ಯೆ.ಪಿಡಿ 16 ಐಎಂಎಂ 2010 ದಿನಾಂಕ: 04–05–2010ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಎನ್. ಕೃಷ್ಣಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ–1,
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

## ಸರ್ಕಾರದ ಆದೇಶ ಸಂಖ್ಯೆ: ಮಮಇ 67 ಮಭಾಬ 2010, ಬೆಂಗಳೂರು, ದಿನಾಂಕ: 09.09.2010 ಕ್ಕೆ ಅನುಬಂಧ

**I. ಯೋಜನೆಯ ಉದ್ದೇಶ :**

ದೇಶದ ಆರ್ಥಿಕ ಪರಿಸ್ಥಿತಿಯಲ್ಲಿ ಆಗುತ್ತಿರುವ ಪ್ರಗತಿಪರ ಬದಲಾವಣೆಯಿಂದಾಗಿ ಹೆಚ್ಚು ಮಹಿಳೆಯರು ಉದ್ಯೋಗವಕಾಶವನ್ನು ಅರಸಿ, ಪಟ್ಟಣ ಹಾಗೂ ನಗರ ಪ್ರದೇಶಗಳಲ್ಲಿ ವಾಸಿಸುತ್ತಿದ್ದು, ಇಂತಹ ಮಹಿಳೆಯರು ಎದುರಿಸುತ್ತಿರುವ ಸಮಸ್ಯೆಗಳಲ್ಲಿ ಮುಖ್ಯವಾದುದು ಸುರಕ್ಷಿತ ಹಾಗೂ ಯೋಗ್ಯ ವಸತಿ ಸೌಕರ್ಯ. ಈ ಮಹಿಳೆಯರ ಸಮಸ್ಯೆಗಳನ್ನು ಮನಗಂಡು ವಸತಿ ಸೌಲಭ್ಯಗಳನ್ನು ಕಲ್ಪಿಸಿಕೊಡುವ ಉದ್ದೇಶದಿಂದ ರಾಜ್ಯ ಸರ್ಕಾರದ ಉದ್ಯೋಗಸ್ಥ ಮಹಿಳೆಯರ ವಸತಿ ಗೃಹ ನಿರ್ಮಾಣ ಯೋಜನೆಯನ್ನು ಅನುಷ್ಠಾನಗೊಳಿಸಲು ಉದ್ದೇಶಿಸಲಾಗಿದೆ.

**II. ಉದ್ದೇಶಿತ ಕಾರ್ಯಕ್ರಮ :**

1. ಖಾಸಗಿ ಮತ್ತು ಸ್ವಯಂಸೇವಾ ಸಂಸ್ಥೆಗಳು ನೋಂದಾವಣೆಯಾದ ಸಂಸ್ಥೆಯಾಗಿರಬೇಕು.
2. ಈ ಸಂಸ್ಥೆಗಳು ಮಹಿಳಾ ಕ್ಷೇತ್ರದಲ್ಲಿ ಕನಿಷ್ಠ ಪಕ್ಷ 2 ವರ್ಷಗಳ ಗಣನೀಯವಾದ ಸೇವೆ ಸಲ್ಲಿಸಿರಬೇಕು.
3. ಈ ಸಂಸ್ಥೆಗಳು ಕಾರ್ಯಕ್ಷೇತ್ರದಲ್ಲಿ ತೃಪ್ತಿಕರವಾಗಿ ಕಾರ್ಯನಿರ್ವಹಿಸಿ, ರಾಜ್ಯ ಸರ್ಕಾರದಿಂದ ಗುರುತಿಸಿರಬೇಕು.
4. ಈ ಸಂಸ್ಥೆಗಳ ನೋಂದಣಿ ಪ್ರತೀ ವರ್ಷ ನವೀಕರಣಗೊಂಡಿರಬೇಕು.

5. ಈ ಸಂಸ್ಥೆಗಳು ಸೂಕ್ತವಾದ ನಿಯಮಬದ್ಧವಾದ ಕಾರ್ಯಕಾರಿ ಸಮಿತಿಯನ್ನು ಹೊಂದಿದ್ದು, ಅವುಗಳ ಅಧಿಕಾರವ್ಯಾಪ್ತಿ ಕರ್ತವ್ಯಗಳು ಮತ್ತು ಜವಾಬ್ದಾರಿಗಳನ್ನು ನಿಖರವಾಗಿ ನಮೂದಿಸಿರಬೇಕು ಹಾಗೂ ಲಿಖಿತವಾಗಿ ಸಂವಿಧಾನ ಬದ್ಧರಾಗಿರಬೇಕು.
6. ಈ ಸಂಸ್ಥೆಗಳು ಆರ್ಥಿಕವಾಗಿ ಸದೃಢವಾಗಿರಬೇಕು ಮತ್ತು ಸಂಪನ್ಮೂಲಗಳು, ಸಿಬ್ಬಂದಿಗಳು ಮತ್ತು ವಸತಿ ನಿಲಯಗಳನ್ನು ನಿರ್ಮಾಣ ಮಾಡುವ ಆಸಕ್ತಿ ಹಾಗೂ ಅನುಭವವನ್ನು ಹೊಂದಿರಬೇಕು.
7. ಈ ಸಂಸ್ಥೆಗಳು ಯಾವುದೇ ವ್ಯಕ್ತಿಗಾಗಲೀ ಅಥವಾ ಲಾಭಾಂಶಕ್ಕಾಗಲೀ ಕೆಲಸ ನಿರ್ವಹಿಸಬಾರದು.
8. ಈ ಸಂಸ್ಥೆಗಳು ಯಾವುದೇ ಲಾಭಾಂಶದ ಆಧಾರದ ಮೇಲೆ ಉದ್ಯೋಗಸ್ಥ ಮಹಿಳೆಯರ ವಸತಿ ಗೃಹಗಳನ್ನು ನಡೆಸಬಾರದು.
9. ಖಾಸಗಿ ಅಥವಾ ಸ್ವಯಂ ಸೇವಾ ಸಂಸ್ಥೆಗಳು ಇದೇ ಉದ್ದೇಶಕ್ಕಾಗಿ ಇತರೆ ಸರ್ಕಾರಿ ಮೂಲಗಳಿಂದ ಅನುದಾನವನ್ನು ಪಡೆದಿರಬಾರದು.

**III. ಆರ್ಥಿಕ ಸಹಾಯಾನುದಾನ :**

1. ಜಿಲ್ಲಾ ಕೇಂದ್ರಗಳಲ್ಲಿನ 25 ಕೊಠಡಿಗಳುಳ್ಳ ಉದ್ಯೋಗಸ್ಥ ಮಹಿಳೆಯರ ವಸತಿಗೃಹವನ್ನು ನಿರ್ಮಿಸುವ ಖಾಸಗಿ ಮತ್ತು ಸ್ವಯಂಸೇವಾ ಸಂಸ್ಥೆಗಳಿಗೆ ರೂ.25.00 ಲಕ್ಷಗಳ ಮಿತಿಗೊಳಪಟ್ಟಂತೆ ಸರ್ಕಾರದಿಂದ ನೆರವು ಒದಗಿಸಲಾಗುವುದು.
2. ಪ್ರತಿ ಜಿಲ್ಲೆಯ ಕೇಂದ್ರ ಸ್ಥಾನದಲ್ಲಿ ಹಾಗೂ ಬೇಡಿಕೆಯಿದ್ದಲ್ಲಿ ತಾಲ್ಲೂಕು ಕೇಂದ್ರಗಳಲ್ಲಿ ಖಾಸಗಿ ಸಂಸ್ಥೆ ಅಥವಾ ಸ್ವಯಂ ಸೇವಾ ಸಂಸ್ಥೆಗಳು ಉದ್ಯೋಗಸ್ಥ ಮಹಿಳೆಯರ ವಸತಿಗೃಹ ನಿರ್ಮಾಣ ಮಾಡಲು ಅಭಿವೃದ್ಧಿ ಪ್ರಾಧಿಕಾರ / ಮಹಾನಗರ ಪಾಲಿಕೆಯವರು 10,000 ಚದರ ಅಡಿ ನಿವೇಶನವನ್ನು ಶೇಕಡ 50ರ ಗೈಡೆನ್ಸ್ ಮೌಲ್ಯದಂತೆ ಒದಗಿಸುತ್ತಾರೆ. ಸರ್ಕಾರದಿಂದ ಅನುದಾನಕ್ಕಾಗಿ ಅರ್ಜಿ ಸಲ್ಲಿಸುವ ಮುನ್ನ ಖಾಸಗಿ ಸಂಸ್ಥೆ ಅಥವಾ ಸ್ವಯಂ ಸೇವಾ ಸಂಸ್ಥೆಗಳು ಅಭಿವೃದ್ಧಿ ಪ್ರಾಧಿಕಾರ/ಮಹಾನಗರ ಪಾಲಿಕೆಯ ಮಂಜೂರಾತಿ ಆದೇಶವನ್ನು ದಾಖಲೆಗಳೊಂದಿಗೆ ಸರ್ಕಾರಕ್ಕೆ ಸಲ್ಲಿಸಬೇಕು.

**IV. ಆಯ್ಕೆ ಮಾಡುವ ವಿಧಾನ :**

1. ಅವಶ್ಯವಿರುವ ಜಿಲ್ಲಾ/ತಾಲ್ಲೂಕು ಕೇಂದ್ರಗಳಲ್ಲಿ ಉದ್ಯೋಗಸ್ಥ ಮಹಿಳಾ ವಸತಿ ನಿಲಯಗಳನ್ನು ನಿರ್ಮಾಣ ಮಾಡಲು ಏಕ ರೂಪ ನೀಲಿ ನಕ್ಷೆ ಹಾಗೂ ಗೃಹ ನಿರ್ಮಾಣ ಮಾಡುವ ಮತ್ತು ನಿರ್ವಹಿಸುವ ಸ್ವಯಂ ಸೇವಾ ಸಂಸ್ಥೆಗಳು ಅಥವಾ ಇತರ ಸಂಸ್ಥೆಗಳನ್ನು ಗುರುತಿಸಲು ಟೆಂಡರ್ ಪ್ರಕ್ರಿಯೆಯನ್ನು, ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರೊಂದಿಗೆ ಸಮಾಲೋಚಿಸಿ ಟೆಂಡರ್ ಷರತ್ತು ಮತ್ತು ನಿಬಂಧನೆಗಳನ್ನು ಒಳಗೊಂಡಂತೆ ಟೆಂಡರ್ ದಾಖಲೆಗಳನ್ನು ತಯಾರಿಸುವುದು ಸೇರಿದಂತೆ, ಕೈಗೊಳ್ಳಲು ಅಧಿಸೂಚನೆ ಸಂಖ್ಯೆ: ಐಡಿಡಿ 201 ಐಟಿಎಸ್ 2007, ದಿನಾಂಕ: 03.01.2009 ರಲ್ಲಿ ನಿಗಧಿಪಡಿಸಿರುವ ಪೂರ್ವಾನು ಅರ್ಹತೆಯುಳ್ಳ ಪಟ್ಟಿಯಲ್ಲಿನ ಸಂಸ್ಥೆಗಳ ಮೂಲಕ ಕ್ರಮ ವಹಿಸತಕ್ಕದ್ದು.
2. ಸದರಿ ಟೆಂಡರ್ ಪ್ರಕ್ರಿಯೆ ಅನ್ವಯ ಆಯ್ಕೆಯಾದ ಸಂಸ್ಥೆಗಳು, ಉದ್ಯೋಗಸ್ಥ ಮಹಿಳಾ ವಸತಿ ಗೃಹಗಳನ್ನು ನಿರ್ಮಿಸಿ ನಿರ್ವಹಿಸತಕ್ಕದ್ದು.
3. ರಾಜ್ಯ ಸರ್ಕಾರದಿಂದ ಅನುಮೋದಿಸಿದ ಉದ್ಯೋಗಸ್ಥ ಮಹಿಳೆಯರ ವಸತಿ ಗೃಹ ಕಟ್ಟಡದ ನಕ್ಷೆಯಂತೆ ಕಟ್ಟಡವನ್ನು ನಿರ್ಮಾಣ ಮಾಡಬೇಕಾಗಿರುತ್ತದೆ.
4. ರಾಜ್ಯ ಸರ್ಕಾರದಿಂದ ಹಣ ಬಿಡುಗಡೆ ದಿನಾಂಕದಿಂದ 1 ವರ್ಷದೊಳಗೆ ಕಟ್ಟಡವನ್ನು ಪೂರ್ಣಗೊಳಿಸಬೇಕಾಗಿರುತ್ತದೆ.
5. ಕಟ್ಟಡವು ಪೂರ್ಣಗೊಂಡ ನಂತರ ಲೋಕೋಪಯೋಗಿ ಇಲಾಖೆಯಿಂದ ಅನುಮೋದಿಸಿದ ನಕ್ಷೆ ಅಂದಾಜು ವೆಚ್ಚಗಳನ್ವಯ ಪೂರ್ಣಗೊಂಡ ದೃಢೀಕರಣ ಪತ್ರವನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.
6. ಖರ್ಚು ವೆಚ್ಚದ ಪಟ್ಟಿಯನ್ನು ಚಾರ್ಟೆರ್ಡ್ ಅಕೌಂಟೆಂಟ್‌ರವರಿಂದ ದೃಢೀಕರಣದೊಂದಿಗೆ ಸಲ್ಲಿಸತಕ್ಕದ್ದು.
7. ಉದ್ಯೋಗಸ್ಥ ಮಹಿಳೆಯರ ವಸತಿ ಗೃಹವನ್ನು ನಿರ್ಮಿಸುವಾಗ ಮತ್ತು ಪೂರ್ಣಗೊಂಡ ನಂತರ ರಾಜ್ಯ ಸರ್ಕಾರದಿಂದ ನೇಮಿಸಲ್ಪಟ್ಟ ಅಧಿಕಾರಿಗಳನ್ನು ತಪಾಸಣೆಗೆ ಅನುವು ಮಾಡಿಕೊಡತಕ್ಕದ್ದು.
8. ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಗೆ ಸಂಸ್ಥೆಗಳು ಪ್ರಗತಿ ವರಿದಿಯನ್ನು ನಿರ್ಮಾಣ ಹಂತದಲ್ಲಿ ಹಾಗೂ ತದನಂತರ ಕ್ರಮವಾಗಿ ಸಲ್ಲಿಸುವುದು.
9. ಯಾವುದೇ ಲಾಭ ಹಾಗೂ ನಷ್ಟವಿಲ್ಲದೆ ವಸತಿ ಸೌಲಭ್ಯ ಪಡೆದಿರುವ ಉದ್ಯೋಗಸ್ಥ ಮಹಿಳೆಯರಿಂದ ಮೆಸ್, ನೀರು, ವಿದ್ಯುತ್ ಶುಲ್ಕ ಮತ್ತು ಪೀಠೋಪಕರಣಗಳ ವೆಚ್ಚವನ್ನು ಪಡೆಯತಕ್ಕದ್ದು.
10. ಉದ್ಯೋಗಸ್ಥ ಮಹಿಳೆಯರ ಅನುಕೂಲಕ್ಕಾಗಿ ವಸತಿ ನಿಲಯಕ್ಕೆ ಹೊಂದಿಕೊಂಡಂತೆ ಉದ್ಯೋಗಸ್ಥ ಮಹಿಳೆಯರ ಚಿಕ್ಕ ಮಕ್ಕಳಿಗಾಗಿ ಶಿಶು ಪಾಲನಾ ಕೇಂದ್ರವನ್ನು ನಡೆಸತಕ್ಕದ್ದು. ಇದಕ್ಕಾಗಿ ಉದ್ಯೋಗಸ್ಥ ಮಹಿಳೆಯರ ಒಟ್ಟು ವರಮಾನದ ಶೇ.5 ರಷ್ಟು ಹಣವನ್ನು ಪಡೆಯತಕ್ಕದ್ದು, ಇಲ್ಲದಿದ್ದಲ್ಲಿ ವಾಸ್ತವ ಖರ್ಚನ್ನು ಪಡೆಯಬಹುದು.
11. ಉದ್ಯೋಗಸ್ಥ ಮಹಿಳೆಯರು ಪ್ರತಿ ನಿತ್ಯ ಓಡಾಡಲು ಅನುಕೂಲವಾಗುವಂತಹ, ಸುರಕ್ಷಿತ ಸ್ಥಳದಲ್ಲಿರಬೇಕು.
12. 18–60 ವರ್ಷದೊಳಗಿನ ಪ್ರತಿ ಉದ್ಯೋಗಸ್ಥ ಮಹಿಳೆಯರು ವಸತಿ ಗೃಹದಲ್ಲಿ ವಸತಿ ಬಯಸಿದ್ದಲ್ಲಿ, ನಿಗಧಿತ ಅರ್ಜಿಯನ್ನು ತಾವು ಉದ್ಯೋಗ ನಿರ್ವಹಿಸುತ್ತಿರುವ ಸಂಸ್ಥೆ/ಕಛೇರಿ ಇತ್ಯಾದಿಯ ಮುಖ್ಯಸ್ಥರಿಂದ ಉದ್ಯೋಗ ನಿರ್ವಹಿಸುತ್ತಿರುವ ಕುರಿತು ಹಾಗೂ ಸ್ವೀಕರಿಸುತ್ತಿರುವ ವೇತನ ಪ್ರಮಾಣ ಪತ್ರ ಒಳಗೊಂಡಂತೆ ಸಂಬಂಧಪಟ್ಟ ವಸತಿ ಗೃಹಗಳಿಗೆ ಸಲ್ಲಿಸಿ ಸ್ವೀಕೃತಿಯನ್ನು ಪಡೆಯತಕ್ಕದ್ದು. ಸಂಬಂಧಪಟ್ಟ ಉದ್ಯೋಗಸ್ಥ ಮಹಿಳಾ ವಸತಿ ಗೃಹದ ಪ್ರಾಧಿಕಾರವು ಸದರಿ ಅರ್ಜಿಗಳನ್ನು ಪ್ರತ್ಯೇಕವಾಗಿ ನಿರ್ವಹಿಸುವ ವಹಿಗಳಲ್ಲಿ ನೊಂದಾಯಿಸತಕ್ಕದ್ದು ಮತ್ತು ಮೊದಲು ಅರ್ಜಿ ಸಲ್ಲಿಸಿದವರಿಗೆ ಆದ್ಯತೆಯನ್ನು ನೀಡತಕ್ಕದ್ದು.
13. ಪ್ರತಿಯೊಬ್ಬ ಉದ್ಯೋಗಸ್ಥ ಮಹಿಳೆಯರು ಗರಿಷ್ಠ 3 ವರ್ಷಗಳ ಅವಧಿಯವರೆಗೆ ವಸತಿ ಸೌಲಭ್ಯವನ್ನು ಪಡೆಯಬಹುದು. 3 ವರ್ಷಗಳ ನಂತರ ಯಾವುದೇ ಕಾರಣಕ್ಕಾಗಿ ಈ ಸೌಲಭ್ಯವನ್ನು ಮುಂದುವರೆಸಬಾರದು ಅಥವಾ ಉದ್ಯೋಗದಿಂದ ತೆಗೆದು ಹಾಕಿದಲ್ಲಿ/ರಾಜೀನಾಮೆ ನೀಡಿದ್ದಲ್ಲಿ/ಕೆಲಸ ಕಳೆದುಕೊಂಡಲ್ಲಿ, ನಿರುದ್ಯೋಗಿಯಾದ ಒಂದು ತಿಂಗಳೊಳಗೆ ವಸತಿ ಗೃಹವನ್ನು ತೆರವುಗೊಳಿಸತಕ್ಕದ್ದು.

14. ಈ ಸಂಸ್ಥೆಗಳು ಕಟ್ಟಡದ ಮೇಲ್ಭಾಗದಲ್ಲಿ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಅನುದಾನದೊಂದಿಗೆ ನಡೆಸುತ್ತಿರುವುದಾಗಿ ಫಲಕವನ್ನು ಕಡ್ಡಾಯವಾಗಿ ಪ್ರದರ್ಶಿಸತಕ್ಕದ್ದು.
15. ಉದ್ಯೋಗಸ್ಥ ಮಹಿಳೆಯರ ವಸತಿ ನಿಲಯದ ಸೌಲಭ್ಯವನ್ನು ಎಲ್ಲಾ ವರ್ಗದ ಮಹಿಳೆಯರಿಗೆ ನೀಡತಕ್ಕದ್ದು. ಪ್ರವೇಶವನ್ನು ನೀಡುವ ವೇಳೆಯಲ್ಲಿ ಶೇ.30 ರಷ್ಟನ್ನು ಪರಿಶಿಷ್ಟ ಜಾತಿ/ವರ್ಗ, ಹಿಂದುಳಿದ ವರ್ಗ, ಅಲ್ಪಸಂಖ್ಯಾತರು ಹಾಗೂ ಅಂಗವಿಕಲರಿಗೆ ಕಾದಿರಿಸತಕ್ಕದ್ದು.
16. ವಸತಿ ನಿಲಯ ಪೂರ್ಣಗೊಂಡ ನಂತರ ಜಿಲ್ಲಾ ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಹಾಗೂ ನಿವಾಸಿಗಳ ಪ್ರತಿನಿಧಿಗಳು ಒಳಗೊಂಡ ಹಾಸ್ಟೆಲ್ ಮ್ಯಾನೇಜ್‌ಮೆಂಟ್ ಕಮಿಟಿಯನ್ನು ರೂಪಿಸಿ 3 ತಿಂಗಳಿಗೊಮ್ಮೆ ಸಭೆ ನಡೆಸತಕ್ಕದ್ದು. ಸಂಸ್ಥೆಯು ನಿಯಮಗಳನ್ನು ಉಲ್ಲಂಘಿಸಿದಾಗ ಅಥವಾ ಸರಿಯಾಗಿ ನಡೆಸದಿದ್ದಲ್ಲಿ, ಗರಿಷ್ಠ ಶೇ.5 ರಷ್ಟು ದಂಡವನ್ನು ವಿಧಿಸುವ ಹಕ್ಕನ್ನು ಜಿಲ್ಲಾ ಸಮಿತಿಯು ಹೊಂದಿದೆ.
17. ಉದ್ಯೋಗಸ್ಥ ಮಹಿಳೆಯರ ವಸತಿಗೃಹದ ವಾರ್ಡನ್‌ಗೆ ವಸತಿ ಸೌಲಭ್ಯವನ್ನು ಅದೇ ಕಟ್ಟಡದಲ್ಲಿ ಒದಗಿಸತಕ್ಕದ್ದು.
18. ನಿವಾಸಿಗಳಿಗೆ ಅನುಕೂಲವಾಗುವಂತೆ ವೈದ್ಯಕೀಯ ಸೌಲಭ್ಯಗಳನ್ನು ಒದಗಿಸತಕ್ಕದ್ದು.
19. ಯಾವುದೇ ಸಮಯದಲ್ಲಿ ಸಂಘ / ಸಂಸ್ಥೆಗಳು ತಮ್ಮ ಕಾರ್ಯಚಟುವಟಿಕೆಗಳನ್ನು ಸ್ಥಗಿತಗೊಳಿಸಿದ ಸಂದರ್ಭಗಳಲ್ಲಿ ರಾಜ್ಯ ಸರ್ಕಾರದ ಅನುದಾನದಿಂದ ಪೂರ್ಣವಾಗಿ ಅಥವಾ ಭಾಗಶಃ ಗಳಿಸಿದ ಎಲ್ಲಾ ಆಸ್ತಿಯನ್ನು ಪರಭಾರೆ ಮಾಡುವುದಾಗಲಿ ಅಥವಾ ಮಾರಾಟ ಮಾಡುವುದಾಗಲಿ ಅಥವಾ ಉದ್ದೇಶಿತ ಕಾರ್ಯಕ್ರಮಕ್ಕಲ್ಲದೆ ಇತರೆ ಉದ್ದೇಶಗಳಿಗಾಗಿ ಉಪಯೋಗಿಸತಕ್ಕದ್ದಲ್ಲ. ಇಂತಹ ಆಸ್ತಿಯನ್ನು ಸರ್ಕಾರದಿಂದ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.
20. ವಸತಿಗೃಹದ ಲೆಕ್ಕಪತ್ರಗಳನ್ನು ಪ್ರತ್ಯೇಕವಾಗಿ ಮತ್ತು ಕ್ರಮವಾಗಿ ನಿರ್ವಹಿಸತಕ್ಕದ್ದು. ರಾಜ್ಯ ಸರ್ಕಾರದಿಂದ ನಿಯೋಜಿಸಲ್ಪಟ್ಟ ಅಧಿಕಾರಿಗಳು ಈ ವಸತಿನಿಲಯದ ಲೆಕ್ಕಪತ್ರಗಳನ್ನು ತಪಾಸಣೆ ಮಾಡಲು ಅಧಿಕಾರ ಹೊಂದಿರುತ್ತಾರೆ.
21. ಯಾವ ಉದ್ದೇಶಕ್ಕಾಗಿ ಈ ಅನುದಾನವನ್ನು ಉಪಯೋಗಿಸಬೇಕಾಗಿದೆಯೋ ಅಂತಹ ಉದ್ದೇಶಕ್ಕೆ ಹಣವನ್ನು ಬಳಕೆ ಮಾಡದಿದ್ದ ಪಕ್ಷದಲ್ಲಿ ರಾಜ್ಯ ಸರ್ಕಾರವು ಮುಂದಿನ ಕಂತುಗಳ ಅನುದಾನ ಬಿಡುಗಡೆಗೊಳಿಸುವಿಕೆಯನ್ನು ನಿಲ್ಲಿಸಲಾಗುವುದು ಹಾಗೂ ಈಗಾಗಲೇ ಮಂಜೂರಾದ ಹಣವನ್ನು ತನಗೆ ತೋಚಿದ ಮತ್ತು ಸರಿ ಎನಿಸಿದ ರೀತಿಯಲ್ಲಿ ವಸೂಲಿ ಮಾಡಲು ಸ್ವತಂತ್ರ ನಿರ್ಧಾರ ಕೈಗೊಳ್ಳುವಂತಹ ಅಧಿಕಾರ ಹೊಂದಿರುತ್ತದೆ.
22. ಶಾಲೆ / ಕಾಲೇಜು ವಿದ್ಯಾರ್ಥಿನಿಯರಿಗೆ ಅವಕಾಶವಿಲ್ಲದಂತೆ ನೋಡಿಕೊಳ್ಳುವುದು.
23. ಸಂಖ್ಯಾಬಲವನ್ನು ಕನಿಷ್ಠ 50 ಹಾಗೂ ಗರಿಷ್ಠ 100 ಕ್ಕೆ ಮಿತಿಗೊಳಿಸತಕ್ಕದ್ದು. ಪ್ರವೇಶ ಪಡೆಯುವ ಮಹಿಳೆಯರ ವಯೋಮಿತಿಯು 18 ರಿಂದ 60 ವರ್ಷದೊಳಗಿರಬೇಕು.

**V. ಕೊಠಡಿ ಶುಲ್ಕ ನಿಗದಿ :**

| | |
|---|---|
| ಏಕ ಕೊಠಡಿಗೆ (Single Occupancy) | ಮಹಿಳೆಯ ವರಮಾನದಲ್ಲಿ ಶೇ. 10ರಷ್ಟು |
| ಜೋಡಿ ಕೊಠಡಿಗೆ (Double Occupancy) | ಮಹಿಳೆಯ ವರಮಾನದಲ್ಲಿ ಶೇ. 5ರಷ್ಟು |
| ಇತರೆ | ಮಹಿಳೆಯ ವರಮಾನದಲ್ಲಿ ಶೇ. 3ರಷ್ಟು |

ಕೊಠಡಿ ಶುಲ್ಕ ಪಡೆಯತಕ್ಕದ್ದು. ಈ ಮೊತ್ತವನ್ನು ವಸತಿಗೃಹ ನಿರ್ವಹಣೆ ವೆಚ್ಚಕ್ಕಾಗಿ (ರಿಪೇರಿ, ವಾರ್ಡನ್, ಕಾವಲುಗಾರ, ಅಡುಗೆಯವರ ಸಂಬಳ ಇತ್ಯಾದಿ) ಭರಿಸತಕ್ಕದ್ದು.

**VI. ಒದಗಿಸಬೇಕಾದ ಸೌಕರ್ಯಗಳು :**

1. ಕನಿಷ್ಠ 10 ಸ್ನಾನದ ಕೋಣೆ, 10 ಶೌಚಾಲಯದ ಸೌಲಭ್ಯ ಹಾಗೂ ಅಡಚಣೆ ಇಲ್ಲದ ನೀರಿನ ವ್ಯವಸ್ಥೆಯನ್ನು ಒದಗಿಸಬೇಕು.
2. ವಾರ್ಡನ್ ಹಾಗೂ ಕಾವಲುಗಾರ ವ್ಯವಸ್ಥೆ ಇರಬೇಕು.

**VII. ಅನುದಾನ ಬಿಡುಗಡೆ :**

ವಸತಿ ಗೃಹ ಕಟ್ಟಡ ನಿರ್ಮಾಣಕ್ಕಾಗಿ ಮಂಜೂರಾದ ಅನುದಾನವನ್ನು 4 ಕಂತುಗಳಲ್ಲಿ ಕೆಳಗಿನಂತೆ ಬಿಡುಗಡೆ ಮಾಡಲಾಗುವುದು.

- ಮೊದಲನೇ ಕಂತಿನಲ್ಲಿ ಒಟ್ಟು ಅನುದಾನದ ಶೇ.30 ರಷ್ಟು ಬಿಡುಗಡೆ
- ಎರಡನೇ ಕಂತಿನಲ್ಲಿ ಶೇ.30 ರಷ್ಟು ಬಿಡುಗಡೆ
- ಮೂರನೇ ಕಂತಿನಲ್ಲಿ ಶೇ.20 ರಷ್ಟು ಬಿಡುಗಡೆ
- ನಾಲ್ಕನೇ ಕಂತಿನಲ್ಲಿ ಶೇ.20 ರಷ್ಟು ಬಿಡುಗಡೆ
- ಎರಡನೇ, ಮೂರನೇ ಹಾಗೂ ನಾಲ್ಕನೇ ಕಂತಿನ ಅನುದಾನ ಬಿಡುಗಡೆಗೆ ನಿರ್ಮಾಣದ ಹಂತದ ಬಗ್ಗೆ ಫೋಟೋ ಸಹಿತ ವರದಿ ಹಾಗೂ ಹಿಂದಿನ ಕಂತಿನಲ್ಲಿ ಬಿಡುಗಡೆಯಾದ ಹಣಕ್ಕೆ ಉಪಯುಕ್ತತಾ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು.
- ನಿರ್ಮಾಣದ ವೆಚ್ಚವು ರೂ.25.00 ಲಕ್ಷಕ್ಕೆ ಮೀರಿದಲ್ಲಿ, ಹೆಚ್ಚುವರಿ ಮೊತ್ತವನ್ನು ಸಂಸ್ಥೆಯವರೇ ಭರಿಸತಕ್ಕದ್ದು.

**ಎಸ್.ಎನ್. ಕೃಷ್ಣಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ–1,
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

ಪಿ.ಆರ್. 2411

## ಶಿಕ್ಷಣ ಸಚಿವಾಲಯ

**ವಿಷಯ :** ಕಿತ್ತೂರು ರಾಣಿ ಚೆನ್ನಮ್ಮ ಹೆಣ್ಣುಮಕ್ಕಳ ವಸತಿ ಶಾಲೆ, ಕಿತ್ತೂರು, ಬೈಲಹೊಂಗಲ ತಾಲ್ಲೂಕು ಬೆಳಗಾಂ ಜಿಲ್ಲೆ ಈ ಶಾಲೆಗೆ ವಿದ್ಯಾರ್ಥಿವೇತನ, ಆಹಾರ ಭತ್ಯೆ, ಮತ್ತು ಪಾಲಕರ/ಪೋಷಕರ ಆದಾಯಮಿತಿ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ :**
1. ಆಯುಕ್ತರು, ಸಾ.ಶಿ.ಇಲಾಖೆ, ಬೆಂಗಳೂರು ಇವರ ಪ್ರಸ್ತಾವನೆ ಸಂ: ವಾಶಿ/ಕಿ.ರಾ.ಚ.ವ.ಶಾಲೆ/ಪಾ.ಪೋ.ಆ.ಮಿತಿ/2009–10 ದಿನಾಂಕ: 08–07–2010.
2. ಸರ್ಕಾರದ ಆದೇಶ ಸಂ: ಇಡಿ 07 ಸಿ.ಎಸ್.ಬಿ. 2001 ದಿನಾಂಕ: 28–03–2003.
3. ಸರ್ಕಾರದ ಆದೇಶ ಸಂ: ಇಡಿ 04 ಸಿ.ಎಸ್.ಬಿ. 2008 ದಿನಾಂಕ: 01–09–2009.

**ಪ್ರಸ್ತಾವನೆ :**

1. ಮೇಲೆ ಓದಲಾದ 1ರಲ್ಲಿ ಆಯುಕ್ತರು ಸಾರ್ವಜನಿಕ ಶಿಕ್ಷಣ ಇಲಾಖೆ ಬೆಂಗಳೂರು ಇವರು ಕಿತ್ತೂರು ರಾಣಿ ಚೆನ್ನಮ್ಮ ಹೆಣ್ಣು ಮಕ್ಕಳ ವಸತಿ ಶಾಲೆ, ಕಿತ್ತೂರು, ಬೈಲಹೊಂಗಲ ತಾಲ್ಲೂಕು, ಬೆಳಗಾಂ ಜಿಲ್ಲೆ ಇದಕ್ಕೆ ಬಿಜಾಪುರ ಸೈನಿಕ ಶಾಲೆಯ ಮಾದರಿಯಲ್ಲಿ ವಿದ್ಯಾರ್ಥಿವೇತನ, ಆಹಾರ ಭತ್ಯೆ, ಮತ್ತು ಪಾಲಕರ / ಪೋಷಕರ ಆದಾಯ ಮಿತಿಯನ್ನು ಹೆಚ್ಚಿಸಲು ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.
2. ಮೇಲೆ (2)ರಲ್ಲಿ ಓದಲಾದ ಸರ್ಕಾರದ ಆದೇಶದಂತೆ, ಕಿತ್ತೂರು ರಾಣಿ ಚನ್ನಮ್ಮ ಹೆಣ್ಣು ಮಕ್ಕಳ ವಸತಿ ಶಾಲೆಗೆ, ವಿದ್ಯಾರ್ಥಿವೇತನ ಮತ್ತು ಇತರೇ ಭತ್ಯೆಗಳನ್ನು ಪರಿಷ್ಕರಿಸಿ ಆದೇಶಿಸಿದೆ.
3. ಮೇಲೆ (3)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ, ಬಿಜಾಪುರ ಸೈನಿಕ ಶಾಲೆಗೆ ಹೆಚ್ಚಿಸಿ ಆದೇಶ ಹೊರಡಿಸಿದೆ.
4. ನಿರ್ದೇಶಕರು (ಪ್ರೌಢಶಿಕ್ಷಣ) ಆಯುಕ್ತರ ಕಛೇರಿ ಬೆಂಗಳೂರು ಇವರು ಪ್ರಸ್ತಾವನೆ ಸಲ್ಲಿಸಿ. ಕಿತ್ತೂರು ರಾಣಿ ಚೆನ್ನಮ್ಮ ಹೆಣ್ಣು ಮಕ್ಕಳ ವಸತಿ ಶಾಲೆಯ ವಿದ್ಯಾರ್ಥಿನಿಯರಿಗೆ ವಿದ್ಯಾರ್ಥಿವೇತನ ಮತ್ತು ಆಹಾರ ಭತ್ಯೆಯನ್ನು ಈ ಕೆಳಕಂಡಂತೆ ಪರಿಷ್ಕರಿಸಿ ಹೆಚ್ಚಿಸಲು ಕೋರಿರುತ್ತಾರೆ.

| ಕ್ರ.ಸಂ. | ಪಾಲಕರ/ಪೋಷಕರ ಆದಾಯಮಿತಿ (ತಿಂಗಳಿಗೆ) | ವಿದ್ಯಾರ್ಥಿ ವೇತನ ದರ ಪರಿಷ್ಕರಿಸಲು | ವಿದ್ಯಾರ್ಥಿವೇತನ ಪರಿಷ್ಕರಿಸಲು ಒಬ್ಬ ವಿದ್ಯಾರ್ಥಿಗೆ ಒಂದು ವರ್ಷಕ್ಕೆ | ಆಹಾರ ಭತ್ಯೆ ಪ್ರತಿ ದಿನಕ್ಕೆ ರೂ.25 ರಂತೆ, ಪರಿಷ್ಕರಿಸಲು |
|---|---|---|---|---|
| (1) | (2) | (3) | (4) | (5) |
| 1 | ರೂ.8000/–ದವರೆಗೆ | ಪೂರ್ಣ ವಿದ್ಯಾರ್ಥಿ ವೇತನ | ರೂ. 25,000/– | ರೂ. 7375/– |
| 2 | ರೂ.8001 ರಿಂದ 10000ದವರೆಗೆ | 3/4 ಅಂಶ | ರೂ. 18,750/– | ರೂ. 5531/– |
| 3 | ರೂ.10000 ದಿಂದ 12000ದವರೆಗೆ | 1/2 ಅಂಶ | ರೂ. 12,500/– | ರೂ. 3,688/– |
| 4 | ರೂ.12001 ರಿಂದ 15000ದವರೆಗೆ | 1/4 ಅಂಶ | ರೂ. 6,250/– | ರೂ. 1.844/– |
| 5 | ರೂ.15001 ರಿಂದ ಮೇಲ್ಪಟ್ಟು | ಶೂನ್ಯ | ಶೂನ್ಯ | ಶೂನ್ಯ |

5. ಮೇಲೆ ವಿವರಿಸಲಾದ ಸಾರ್ವಜನಿಕ ಶಿಕ್ಷಣ ಇಲಾಖೆಯ ನಿರ್ದೇಶಕರು (ಪ್ರೌಢ ಶಿಕ್ಷಣ) ರವರ ಪ್ರಸ್ತಾವನೆಯನ್ನು ಸಮಗ್ರವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಇಡಿ 128 ಯೋಯೋಕ 2010, ಬೆಂಗಳೂರು, ದಿನಾಂಕ : 06–09–2010**
**(ಇಡಿ 107 ಸ್ವಿಮರ (ಯುನಿಕ್) 2010, ದಿನಾಂಕ : 06–09–2010)**

6. ಕಿತ್ತೂರು ರಾಣಿ ಚೆನ್ನಮ್ಮ ಹೆಣ್ಣು ಮಕ್ಕಳ ವಸತಿ ಶಾಲೆ, ಕಿತ್ತೂರು, ಬೈಲಹೊಂಗಲ ತಾಲ್ಲೂಕು, ಬೆಳಗಾಂ ಜಿಲ್ಲೆ, ಈ ಶಾಲೆಯ ವಿದ್ಯಾರ್ಥಿಗಳ ವಿದ್ಯಾರ್ಥಿವೇತನ, ಆಹಾರ ಭತ್ಯೆ, ಮತ್ತು ಪಾಲಕರ / ಪೋಷಕರ ಆದಾಯ ಮಿತಿಯನ್ನು ಈ ಕೆಳಕಂಡಂತೆ, ಈ ಆದೇಶ ಹೊರಡಿಸಿದ ದಿನಾಂಕದಿಂದ ಪರಿಷ್ಕರಿಸಿ ಆದೇಶಿಸಿದೆ.

| ಕ್ರ.ಸಂ. | ಪಾಲಕರ/ಪೋಷಕರ ಆದಾಯಮಿತಿ (ತಿಂಗಳಿಗೆ) | ವಿದ್ಯಾರ್ಥಿ ವೇತನ ದರ ಪರಿಷ್ಕರಿಸಲು | ವಿದ್ಯಾರ್ಥಿವೇತನ ಪರಿಷ್ಕರಿಸಲು ಒಬ್ಬ ವಿದ್ಯಾರ್ಥಿಗೆ ಒಂದು ವರ್ಷಕ್ಕೆ | ಆಹಾರ ಭತ್ಯೆ ಪ್ರತಿ ದಿನಕ್ಕೆ ರೂ.25 ರಂತೆ, ಪರಿಷ್ಕರಿಸಲು |
|---|---|---|---|---|
| (1) | (2) | (3) | (4) | (5) |
| 1 | ರೂ.8000/–ದವರೆಗೆ | ಪೂರ್ಣ ವಿದ್ಯಾರ್ಥಿ ವೇತನ | ರೂ. 25,000/– | ರೂ. 7375/– |
| 2 | ರೂ.8001 ರಿಂದ 10000ದವರೆಗೆ | 3/4 ಅಂಶ | ರೂ. 18,750/– | ರೂ. 5531/– |
| 3 | ರೂ.10000 ದಿಂದ 12000ದವರೆಗೆ | 1/2 ಅಂಶ | ರೂ. 12,500/– | ರೂ. 3,688/– |

| | | | | |
|---|---|---|---|---|
| 4 | ರೂ.12001 ರಿಂದ 15000ದವರೆಗೆ | 1/4 ಅಂಶ | ರೂ. 6,250/– | ರೂ. 1.844/– |
| 5 | ರೂ.15001 ರಿಂದ ಮೇಲ್ಪಟ್ಟು | ಶೂನ್ಯ | ಶೂನ್ಯ | ಶೂನ್ಯ |

7. ಈ ಬಗೆಗಿನ ವೆಚ್ಚವನ್ನು 2010–11ನೇ ಸಾಲಿಗೆ ಆಯವ್ಯಯ ಲೆಕ್ಕ ಶೀರ್ಷಿಕೆ 2202–02–110–3–01–101 (ಯೋಜನೇತರ) ಅಡಿ ನಿಗದಿಯಾಗಿರುವ ಅನುದಾನದಿಂದ ಭರಿಸತಕ್ಕದ್ದು.
8. ಈ ಆದೇಶವನ್ನು ಆರ್ಥಿಕ ಇಲಾಖೆಯ ದಿನಾಂಕ: 3–9–2010ರ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 501 ವೆಚ್ಚ–8 2010ರ ಸಹಮತಿಯಂತೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಐ.ಎಫ್. ಮಾಗಿ**
ವಿಶೇಷಾಧಿಕಾರಿ ಮತ್ತು ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ
ಶಿಕ್ಷಣ ಇಲಾಖೆ(ಯೋಜನೆ).

ಪಿ.ಆರ್. 2412

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಕೆ. ರವಿಕುಮಾರ, ಮಾಜಿ ಪಿ.ಸಿ., ಬಳ್ಳಾರಿ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**
1) ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಬಳ್ಳಾರಿ, ಇವರ ಆದೇಶ ಸಂಖ್ಯೆ: 6/ಇವಿ/2008 ಜಿ.ಆ.ಸಂ: 714/2008–09 ದಿನಾಂಕ: 24–01–2009
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ, ಇವರ ಆದೇಶ ಸಂಖ್ಯೆ:06/ಅಪೀಲು/ಸಿಬ್ಬಂದಿ–2/2009–10 ಓ.ಬಿ:153/09–10 ದಿ: 13–10–09
3) ಅರ್ಜಿದಾರರುಗಳ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ: 16–01–10
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)81/2009–10 ದಿನಾಂಕ: 14–6–2010

**ಪ್ರಸ್ತಾವನೆ :**

ಶ್ರೀ ಕೆ. ರವಿಕುಮಾರ, ಇವರು ಜಿಲ್ಲಾ ಸಶಸ್ತ್ರ ಪಡೆ, ಬಳ್ಳಾರಿ ಜಿಲ್ಲೆಯಲ್ಲಿ ಸಶಸ್ತ್ರ ಪೊಲೀಸ್ ಕಾನ್ಸ್ ಟೇಬಲ್ ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ದುರ್ನಡತೆ ಹಾಗೂ ಅತೀವ ಅಶಿಸ್ತು ತೋರಿಸಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6 ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿತ್ತು.

**ದೋಷಾರೋಪಣೆ :**

1. ನೀವು ಕ್ರೀಡಾ ಕೋಟಾದಡಿಯಲ್ಲಿ ಸಿಪಿಸಿ ಹುದ್ದೆಗೆ ನೇಮಕಾತಿ ಹೊಂದಿದ್ದು, ದಿನಾಂಕ: 04-02–2008 ರಿಂದ ಕರ್ನಾಟಕ ರಾಜ್ಯ ಪೊಲೀಸ್ ಕ್ರೀಡಾ ನಿಯಂತ್ರಣ ಮಂಡಳಿ, ಬೆಂಗಳೂರಿನ ಅಧಿಕಾರಿಗಳಿಗೆ ಯಾವುದೇ ಮಾಹಿತಿ ನೀಡದೇ ಕ್ರೀಡಾಭ್ಯಾಸಕ್ಕೆ ಬಾರದೇ ಅನಧಿಕೃತವಾಗಿ ಗೈರು ಹಾಜರಾಗಿರುತ್ತೀರೆಂದು, ನಿಮ್ಮ ವಿರುದ್ಧ ಆಪಾದಿಸಲಾಗಿದೆ.
2. ನೀವು ಇಲಾಖೆಯ ಅನುಮತಿ ಪಡೆಯದೇ ಪ್ರಸ್ತುತ ಸಾಲಿನಲ್ಲಿ ಮೈಸೂರಿನಲ್ಲಿ ನಡೆದ ರಾಜ್ಯ ಒಲಂಪಿಕ್ಸ್ ಕ್ರೀಡೆಯಲ್ಲಿ ಬಳ್ಳಾರಿ ಜಿಲ್ಲಾ ಹಾಕಿ ತಂಡದಲ್ಲಿ ಕ್ರೀಡಾಪಟುವಾಗಿ ಭಾಗವಹಿಸಿ ಅತೀವ ಕರ್ತವ್ಯ ದುರ್ನಡತೆ ತೋರಿರುತ್ತೀರೆಂದು ಆಪಾದಿಸಲಾಗಿದೆ.
3. ನಿಮ್ಮನ್ನು ಪೊಲೀಸ್ ಇಲಾಖೆಯಲ್ಲಿ ಹಾಕಿ ಕ್ರೀಡೆಯಲ್ಲಿ ನಿಮಗಿರುವ ವಿಶೇಷ ಕೌಶಲ್ಯತೆಯ ಕಾರಣದಿಂದಾಗಿ ಕರ್ನಾಟಕ ರಾಜ್ಯ ಪೊಲೀಸ್ ಹಾಕಿ ತಂಡಕ್ಕೆ ಉಪಯೋಗವಾಗುವ ಹಿನ್ನೆಲೆಯಲ್ಲಿ ವಿಶೇಷ ಆದ್ಯತೆಯ ಮೇರೆಗೆ ಸಿವಿಲ್ ಪೊಲೀಸ್ ಪೇದೆ ಹುದ್ದೆಗೆ ದಿನಾಂಕ:

   25–11–2007 ರಂದು ನೇಮಕ ಮಾಡಲಾಗಿದ್ದು, ನೀವು ಸದರಿ ನೇಮಕಾತಿಯ ವಿಶೇಷ ಆದ್ಯತೆಯನ್ನು ಗಾಳಿಗೆ ತೂರಿ ಕರ್ನಾಟಕ ರಾಜ್ಯ ಕ್ರೀಡಾ ನಿಯಂತ್ರಣ ಮಂಡಳಿ, ಬೆಂಗಳೂರಿನ ಅಧಿಕಾರಿಗಳಿಗೆ/ಮೇಲಾಧಿಕಾರಿಗಳಿಗೆ ಯಾವುದೇ ಮಾಹಿತಿ ನೀಡದೇ ಮೈಸೂರಿನಲ್ಲಿ ನಡೆದ ರಾಜ್ಯ ಒಲಂಪಿಕ್ಸ್ ಕ್ರೀಡೆಯಲ್ಲಿ ಬಳ್ಳಾರಿ ಜಿಲ್ಲಾ ಹಾಕಿ ಕ್ರೀಡಾಪಟುವಾಗಿ ಭಾಗವಹಿಸಿ ಅತೀವ ಅಶಿಸ್ತು ತೋರಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಬಳ್ಳಾರಿ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 24–01–2009ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾಗೊಳಿಸುವ ದಂಡನೆಯನ್ನು ವಿಧಿಸಿರುತ್ತಾರೆ. ದಿನಾಂಕ: 04–02–2008 ರಿಂದ 19–6–2008 ಹಾಗೂ ದಿನಾಂಕ: 02–09–2008 ರಿಂದ 24–01–2009ರ ವರೆಗೆ ಗೈರು ಹಾಜರಾದ ಅವಧಿಯನ್ನು **ಸಂಬಳರಹಿತ ರಜೆಯೆಂದು** ಪರಿಗಣಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು. ಪೂರ್ವ ವಲಯ, ದಾವಣಗೆರೆ, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 13–10–09ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 17 ಪೊಸಿಅ 2010 ಬೆಂಗಳೂರು, ದಿನಾಂಕ : 14–9–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಕೆ. ರವಿಕುಮಾರ, ಮಾಜಿ ಪಿ.ಸಿ., ಬಳ್ಳಾರಿ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 2413

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀಮತಿ ಎಸ್. ಲಲಿತಮ್ಮ, ಮ.ಹೆಚ್.ಸಿ.–91, ಗೌರಿಬಿದನೂರು ಪೊಲೀಸ್ ಠಾಣೆ, ಬೆಂಗಳೂರು ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**

1) ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಚಿಕ್ಕಬಳ್ಳಾಪುರ ಜಿಲ್ಲೆ, ಇವರ ಆದೇಶ ಸಂಖ್ಯೆ: ಪನ್ನಿ/13/08–09 ಓ.ಬಿ: 16/09 ದಿನಾಂಕ: 31–01–2009
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು, ಇವರ ಆದೇಶ ಸಂಖ್ಯೆ: ಅಪೀಲು/40/ಪನ್ನಿ/2009–10 ಓ.ಬಿ: 112/09–10 ದಿನಾಂಕ: 26–11–2009
3) ಅರ್ಜಿದಾರರುಗಳ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ: 18–3–2010
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು (2)3/2010–11 ದಿನಾಂಕ: 7–7–2010

**ಪ್ರಸ್ತಾವನೆ :**

ಶ್ರೀಮತಿ ಎಸ್. ಲಲಿತಮ್ಮ, ಮ.ಹೆಚ್.ಸಿ.–91, ಗೌರಿಬಿದನೂರು ಪೊಲೀಸ್ ಠಾಣೆ, ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಅತೀವ ದುರ್ನಡತೆ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6 ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿತ್ತು.

**ದೋಷಾರೋಪಣೆ :**

> "ಶ್ರೀಮತಿ ಲಲಿತಮ್ಮ, ಮ.ಹೆಚ್.ಸಿ.–91, ಗುಡಿಬಂಡೆ ಪೊಲೀಸ್ ಠಾಣೆ, ಆದ ನೀವು ಶಿಸ್ತಿನ ಇಲಾಖೆಯಲ್ಲಿದ್ದು, ನಿಯಮಗಳ ಬಗ್ಗೆ ಅರಿವಿದ್ದಾಗ್ಯೂ ಸಹ ಈ ಮೊದಲೇ ಮದುವೆಯಾಗಿದ್ದ ಶ್ರೀ ವೆಂಕಟೇಶಪ್ಪ, ಎ.ಎಸ್.ಐ. (ಹಾಲಿ ದಿವಂಗತರು)ರನ್ನು ಮದುವೆಯಾಗಿದ್ದಲ್ಲದೇ, ಮೃತ ವೆಂಕಟೇಶಪ್ಪರವರ ಮೊದಲನೆಯ ಹೆಂಡತಿಗೆ ಕಾನೂನಿನ ರೀತ್ಯಾ ಸರ್ಕಾರದಿಂದ ದೊರಕಬೇಕಾದ ಸವಲತ್ತುಗಳಿಗೆ ಅಡ್ಡಿಪಡಿಸಿ ಅತೀವ ದುರ್ನಡತೆಯನ್ನು ತೋರಿರುತ್ತೀರೆಂದು ಆರೋಪವಾಗಿರುತ್ತೆ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿರುವುದಿಲ್ಲವೆಂದು ವರದಿ ನೀಡಿದ್ದು, ಶಿಸ್ತು ಪ್ರಾಧಿಕಾರವು ವರದಿಯನ್ನು ಒಪ್ಪದೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಚಿಕ್ಕಬಳ್ಳಾಪುರ ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ದಿನಾಂಕ: 31–01–2009ರ ಆದೇಶದಲ್ಲಿ ಅರ್ಜಿದಾರರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ದಕ್ಕೆಯಾಗದಂತೆ ಮುಂದೂಡುವ ದಂಡನೆಯನ್ನು ವಿಧಿಸಿರುತ್ತಾರೆ. ದಿನಾಂಕ: 15–12–06 ರಿಂದ 12–4–07ರ ವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು. ಕೇಂದ್ರ ವಲಯ, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 26–11–09ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ

ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ದುರ್ನಡತೆ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 47 ಪೊಸಿಅ 2010 ಬೆಂಗಳೂರು, ದಿನಾಂಕ : 14–9–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀಮತಿ ಎಸ್. ಲಲಿತಮ್ಮ, ಮ.ಹೆಚ್.ಸಿ.–91, ಗೌರಿಬಿದನೂರು ಪೊಲೀಸ್ ಠಾಣೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 2414

## ಇಂಧನ ಸಚಿವಾಲಯ

**ವಿಷಯ :** ಜಸ್ಟೀಸ್ ವಿ.ಪಿ.ಮೋಹನ್ ಕುಮಾರ್, ವಿಚಾರಣಾಧಿಕಾರಿಯವರ ಕಾರ್ಯಾಲಯದಲ್ಲಿ ಕಾರ್ಯನಿರ್ವಹಿಸುತ್ತಿರುವ ಸಿಬ್ಬಂದಿ ವರ್ಗದವರಿಗೆ ವೇತನವನ್ನು ನಿಗದಿಪಡಿಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರಿ ಆದೇಶ ಸಂಖ್ಯೆ: ಇಎನ್ 125 ಪಿಪಿಸಿ 2009 ದಿನಾಂಕ: 13.10.2009, 03.02.2010 ಮತ್ತು 14.06.2010.
2. ಸರ್ಕಾರಿ ಆದೇಶ ಸಂಖ್ಯೆ: ಇಎನ್ 125 ಪಿಪಿಸಿ 2009 ದಿನಾಂಕ: 04.12.2009.
3. ಪತ್ರ ಸಂಖ್ಯೆ: ವಿ.ಪಿ.ಎಂ.ಐ/184/2010 ದಿನಾಂಕ: 17.07.2010.
4. ಆರ್ಥಿಕ ಇಲಾಖೆಯ ಹಿಂಬರಹ ಸಂಖ್ಯೆ: ಆಇ 1323 ವೆಚ್ಚ–1/2010 ದಿನಾಂಕ: 27.08.2010.

**ಪ್ರಸ್ತಾವನೆ :**

ಮೇಲೆ ಓದಲಾದ ಸರ್ಕಾರಿ ಆದೇಶ (1)ರಲ್ಲಿ ಉಚ್ಚ ನ್ಯಾಯಾಲಯದ ನಿವೃತ್ತ ನ್ಯಾಯಾಧೀಶರಾದ ಜಸ್ಟೀಸ್ ಶ್ರೀ ವಿ.ಪಿ.ಮೋಹನ್ ಕುಮಾರ್ ರವರನ್ನು ಕರ್ನಾಟಕ ವಿದ್ಯುತ್ ನಿಗಮ ನಿಯಮಿತದಲ್ಲಿ ಕಲ್ಲಿದ್ದಲನ್ನು ಖರೀದಿಸುವಲ್ಲಿ ಹಾಗೂ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದಲ್ಲಿ ಪವರ್ ಟ್ರಾನ್ಸ್‌ಫಾರ್ಮರ್ ಖರೀದಿಸುವಲ್ಲಿ ನಡೆದಿರುವ ಅಕ್ರಮಗಳ ಬಗ್ಗೆ ವಿಚಾರಣೆಯನ್ನು ನಡೆಸಲು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿದೆ ಮತ್ತು ಸರ್ಕಾರಿ ಆದೇಶ ಸಂಖ್ಯೆ: ಇಎನ್ 125 ಪಿಪಿಸಿ 2009 ದಿನಾಂಕ: 03.02.2010 ರಲ್ಲಿ ವಿಚಾರಣೆಯ ಕಾಲಾವಧಿಯನ್ನು ದಿನಾಂಕ: 13.01.2010 ರಿಂದ ಮುಂದಿನ 6 ತಿಂಗಳವರೆಗೆ ವಿಸ್ತರಿಸಲಾಗಿತ್ತು. ತದನಂತರ ಸರ್ಕಾರಿ ಆದೇಶ ದಿನಾಂಕ: 14.06.2010 ರಲ್ಲಿ ವಿಚಾರಣೆಯ ಕಾಲಾವಧಿಯನ್ನು ದಿನಾಂಕ: 31.12.2010 ರವರೆಗೆ ವಿಸ್ತರಿಸಲಾಗಿದೆ.

ಮೇಲೆ ಓದಲಾದ ಸರ್ಕಾರಿ ಆದೇಶ (2) ರಲ್ಲಿ ನ್ಯಾಯಮೂರ್ತಿ ಶ್ರೀ ವಿ.ಪಿ.ಮೋಹನ್ ಕುಮಾರ್, ವಿಚಾರಣಾಧಿಕಾರಿಯವರ ಕಾರ್ಯಾಲಯಕ್ಕೆ ಕಾರ್ಯದರ್ಶಿ ಹಾಗೂ ಇತರೆ ಸಿಬ್ಬಂದಿ ವರ್ಗದ ಹುದ್ದೆಗಳನ್ನು ನೇಮಿಸಿಕೊಳ್ಳಲು ಅನುಮೋದನೆಯನ್ನು ನೀಡಲಾಗಿತ್ತು.

ಮೇಲೆ ಓದಲಾದ ಪತ್ರ (3) ರಲ್ಲಿ ಜಸ್ಟೀಸ್ ಶ್ರೀ ವಿ.ಪಿ.ಮೋಹನ್ ಕುಮಾರ್ ರವರ ಕಾರ್ಯದರ್ಶಿ ಇವರು ಶ್ರೀ ಕೆ.ಎಸ್.ರಾಘವೇಂದ್ರ ರಾವ್, ಶಾಖಾಧಿಕಾರಿಯನ್ನಾಗಿ ದಿನಾಂಕ: 16.07.2010 ರಿಂದ ನೇಮಿಸಿಕೊಂಡಿದ್ದು, ಇವರಿಗೆ ವೇತನವನ್ನು ನಿಗದಿ ಪಡಿಸುವಂತೆ ಕೋರಿರುತ್ತಾರೆ.

ಶ್ರೀ ಕೆ.ಎಸ್.ರಾಘವೇಂದ್ರ ರಾವ್ ಇವರು ಉಚ್ಚ ನ್ಯಾಯಾಲಯದಲ್ಲಿ ಕಾರ್ಯನಿರ್ವಹಿಸಿ ನಿವೃತ್ತಿ ಹೊಂದಿರುತ್ತಾರೆ. ಇವರ ಮರು ನೇಮಕಾತಿ ವೇತನವನ್ನು ನಿಗದಿಪಡಿಸುವ ಬಗ್ಗೆ ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ:–

**ಸರ್ಕಾರದ ಆದೇಶ ಸಂಖ್ಯೆ : ಇಎನ್ 125 ಪಿಪಿಸಿ 2009, ಬೆಂಗಳೂರು, ದಿನಾಂಕ : 04.09.2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶ್ರೀ ಕೆ.ಎಸ್.ರಾಘವೇಂದ್ರ ರಾವ್, ಶಾಖಾಧಿಕಾರಿ ಇವರ ಮರು ನೇಮಕಾತಿ ವೇತನವನ್ನು ಕರ್ನಾಟಕ ನಾಗರೀಕ ಸೇವಾ ನಿಯಮ 313 (ಬಿಬಿ) ಪ್ರಕಾರ ರೂ.11,400/– (ಹನ್ನೊಂದು ಸಾವಿರದ ನಾಲ್ಕು ನೂರು ರೂಪಾಯಿಗಳು ಮಾತ್ರ) ಗಳಿಗೆ ಮಾಸಿಕ ಸಂಬಳ ನಿಗದಿಪಡಿಸಿದೆ ಹಾಗೂ ಈ ವೇತನದ ಮೇಲೆ ಯಾವುದೇ ಭತ್ಯೆಯನ್ನು ಪಡೆಯುವಂತಿಲ್ಲ. ಆದರೆ, ಶ್ರೀಯುತರು ನಿವೃತ್ತಿ ವೇತನದ ಮೇಲಿನ ತುಟ್ಟಿಭತ್ಯೆಯನ್ನು ಪಡೆಯಬಹುದಾಗಿದೆ. ನಿವೃತ್ತಿ ನಂತರದ ಸೇವೆಯನ್ನು ಅರ್ಹತಾದಾಯಕ ಸೇವೆಯೆಂದು ಪರಿಗಣಿಸುವಂತಿಲ್ಲ. ಶ್ರೀಯುತರ ನೇಮಕಾತಿಯು ಈ ಆದೇಶದೊಂದಿಗೆ ಲಗತ್ತಿಸಿರುವ ಅನುಬಂಧದಲ್ಲಿರುವಂತೆ ಷರತ್ತು ಮತ್ತು ನಿಬಂಧನೆಗೊಳಪಟ್ಟಿರುತ್ತದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಹಿಂಬರಹ ಸಂಖ್ಯೆ: ಆಇ 1323 ವೆಚ್ಚ–1/2010 ದಿನಾಂಕ: 27.08.2010 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಜಿ. ಸಂಪತ್‌ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ,

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 125 ಪಿಪಿಸಿ 2009 ದಿನಾಂಕ : 04.09.2010 ಕ್ಕೆ ಅನುಬಂಧ**
**ಗುತ್ತಿಗೆ ಆಧಾರದ ಮರು ನೇಮಕಾತಿಯ ಬಗ್ಗೆ ಷರತ್ತು ಮತ್ತು ನಿಬಂಧನೆಗಳು**

1. ಶ್ರೀ ಕೆ.ಎಸ್.ರಾಘವೇಂದ್ರ ರಾವ್ ಇವರ ಗುತ್ತಿಗೆ ನೇಮಕಾತಿ ಅವಧಿಯು ದಿನಾಂಕ: 16.07.2010 ರಿಂದ 31.12.2010 ರ ಅವಧಿಯವರೆಗೆ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ, ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮಾತ್ರ ಇದ್ದು, ಇದೊಂದ ತಾತ್ಕಾಲಿಕ ನೇಮಕಾತಿ ಆಗಿರುತ್ತದೆ.
2. ಶ್ರೀ ಕೆ.ಎಸ್.ರಾಘವೇಂದ್ರ ರಾವ್ ಇವರು ಪಡೆಯುತ್ತಿರುವ ನಿವೃತ್ತಿ ವೇತನದೊಂದಿಗೆ **ರೂ.11,400/–** ಗಳ ಸಂಚಿತ ವೇತನವನ್ನು ಪಡೆಯಲು ಅರ್ಹರಾಗಿರುತ್ತಾರೆ. ಈ ವೇತನದ ಜೊತೆಗೆ ಅವರು ಪಡೆಯುತ್ತಿರುವ ನಿವೃತ್ತಿ ವೇತನದ ಮೇಲೆ ತುಟ್ಟಿಭತ್ಯೆಯನ್ನು ಪಡೆಯಬಹುದು.
3. ಸದರಿ ಗುತ್ತಿಗೆ ನೌಕರರು ಸಾರ್ವಜನಿಕ ಹಿತದೃಷ್ಟಿಯಿಂದ ಪ್ರಯಾಣ ಮಾಡಲೇ ಬೇಕಾದಲ್ಲಿ ಮಾತ್ರ ಅವರು ನೇಮಕಾತಿ ಹೊಂದಿರುವ ಹುದ್ದೆಯ ಕಾಲಿಕ ವೇತನ ಶ್ರೇಣಿಯ ಕನಿಷ್ಠ ವೇತನದ ಮೇಲೆ ನಿಯಮಾನುಸಾರ ಲಭ್ಯವಿರುವ ಪ್ರಯಾಣ ಭತ್ಯೆ ಮತ್ತು ದಿನಭತ್ಯೆಯನ್ನು ಪಡೆಯಲು ಅರ್ಹರಾಗಿರುತ್ತಾರೆ.
4. ಸದರಿ ಗುತ್ತಿಗೆ ನೌಕರರುಗಳು ವಾರ್ಷಿಕ 15 ದಿನಗಳ ಸಾಂದರ್ಭಿಕ ರಜೆ ಮತ್ತು ಕೆ.ಸಿ.ಎಸ್.ಆರ್ ನಿಯಮ 118 (ಎ) ರ ಪ್ರಕಾರ ಗಳಿಕೆ ರಜೆ ಪಡೆಯಲು ಅರ್ಹರಾಗಿರುತ್ತಾರೆ.
5. ಒಪ್ಪಂದದ ಷರತ್ತು ಮತ್ತು ನಿಬಂಧನೆಗಳಲ್ಲಿ ನೀಡಿರುವ ಸೌಲಭ್ಯಗಳ ಹೊರತಾಗಿ ಬೇರಾವುದೇ ಸೌಲಭ್ಯಕ್ಕೆ ಅಂದರೆ ವೇತನ ಬಡ್ತಿ, ಪದೋನ್ನತಿ, ಪಿಂಚಣಿ ಇತ್ಯಾದಿ ಸೌಲಭ್ಯಗಳಿಗೆ ಸದರಿ ಗುತ್ತಿಗೆ ನೌಕರರು ಅರ್ಹರಾಗಿರುವುದಿಲ್ಲ.
6. ಸದರಿ ನೌಕರರು ದುರ್ವರ್ತನೆ, ನಿರ್ಲಕ್ಷತೆಯ ನಿಮಿತ್ತ ಸರ್ಕಾರಕ್ಕೆ ಸಂಬಂಧಿಸಬಹುದಾದ ಎಲ್ಲಾ ನಷ್ಟಗಳನ್ನು ಸರ್ಕಾರಕ್ಕೆ ಸದರಿ ನೌಕರರು ಭರಿಸಿಕೊಡಲು ಬದ್ಧರಾಗಿರತಕ್ಕದ್ದು.
7. ಸದರಿ ಮರು ನೇಮಕಾತಿ ಅವಧಿಯ ಸೇವೆಯನ್ನು ನಿವೃತ್ತಿ ವೇತನ ಹಾಗೂ ಇತ್ಯಾದಿ ಸೌಲಭ್ಯಗಳಿಗೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸುವುದಿಲ್ಲ.
8. ಅವರ ಕರ್ತವ್ಯ, ಕಾರ್ಯ ಮತ್ತು ಪ್ರಕಾರ್ಯಗಳನ್ನು ಶ್ರದ್ಧೆ, ಭಕ್ತಿ ಮತ್ತು ಆಸಕ್ತಿಯಿಂದ ಅವರು ನೆರವೇರಿಸುವುದು.
9. ಅವರು ಕರ್ತವ್ಯಗಳನ್ನು ಪಾಲಿಸುತ್ತಿರುವ ಅಥವಾ ನೆರವೇರಿಸುತ್ತಿರುವಾಗ ಅವರಿಗೆ ಲಭ್ಯವಾಗಬಹುದಾದ ಅಥವಾ ದೊರಕಬಹುದಾದ ಅಧಿಕೃತ ಮಾಹಿತಿಯನ್ನು ಗೌಪ್ಯವಾಗಿಟ್ಟು ಕಟ್ಟುನಿಟ್ಟಾಗಿ ಪಾಲಿಸಬೇಕು.
10. 1966 ರ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿ ಮತ್ತು 1957 ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗೆ ಅವರು ಬದ್ಧರಾಗಿರುತ್ತಾರೆ.
11. ಈ ಒಪ್ಪಂದದ ಷರತ್ತುಗಳನ್ನು ಉಲ್ಲಂಘಿಸಿದಲ್ಲಿ ಗುತ್ತಿಗೆ ನೇಮಕಾತಿಯು ತಾನಾಗಿಯೇ ಮುಕ್ತಾಯವಾಗುತ್ತದೆ.
12. ಅವರ ದುರ್ನಡತೆಯಿಂದಾಗಲೀ ಅಥವಾ ನಿರ್ಲಕ್ಷತೆ, ಉದಾಸೀನತೆಯಿಂದಾಗಲೀ ಸರ್ಕಾರಕ್ಕೆ ಸಂಬಂಧಿಸಿದಂತೆ ಆರ್ಥಿಕ ನಷ್ಟವನ್ನು ಉಂಟುಮಾಡಿದ್ದಲ್ಲಿ, ಅದನ್ನು ಸರ್ಕಾರಕ್ಕೆ ತುಂಬಿಕೊಡಲು ಅವರು ಹೊಣೆಯಾಗಿರುತ್ತಾರೆ.
13. ಈ ಆದೇಶವನ್ನು ಸ್ವೀಕರಿಸಿದ ದಿನಾಂಕದಿಂದ ಏಳು ದಿನಗಳ ಒಳಗಾಗಿ ಐವತ್ತು (ರೂ.50.00) ರೂಪಾಯಿಗಳ ಮೌಲ್ಯದ ಛಾಪಾ ಕಾಗದದಲ್ಲಿ ಸದರಿ ನೇಮಕಾತಿಯ ಷರತ್ತು ಮತ್ತು ನಿಬಂಧನೆಗಳನ್ನು ಒಳಗೊಂಡಿರುವ ಕರಾರು ಪತ್ರವನ್ನು ಕ್ರಮಬದ್ಧ ರೀತಿಯಲ್ಲಿ ಸದರಿ ನೌಕರರಿಂದ ಬರೆಯಿಸಿಕೊಳ್ಳತಕ್ಕದ್ದು.

**(ಎಸ್.ಜೆ. ಸಂಪತ್‌ಕುಮಾರ್)**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

ಪಿ.ಆರ್. 2415

## ಶಿಕ್ಷಣ ಸಚಿವಾಲಯ

**ವಿಷಯ :** ಕರ್ನಾಟಕ ಪ್ರೌಢಶಿಕ್ಷಣ ಪರೀಕ್ಷಾ ಮಂಡಳಿ ನಡೆಸುವ ಇತರೆ ಪರೀಕ್ಷೆಗಳ ಪೈಕಿ ಡಿ.ಇಡಿ ಪರೀಕ್ಷೆಗೆ ಸಂಬಂಧಿಸಿದ ಮೌಲ್ಯಮಾಪನ ದರಗಳನ್ನು ಪರಿಷ್ಕರಣೆ ಮಾಡುವ ಬಗ್ಗೆ.

**ಓದಲಾಗಿದೆ :** 1. ದಿನಾಂಕ: 11–12–2008ರ ಸರ್ಕಾರದ ಪತ್ರ ಸಂಖ್ಯೆ: ಇಡಿ 527 ಇಎಸ್‌ಡಬ್ಲ್ಯು 2008
2. ಕರ್ನಾಟಕ ಪ್ರೌಢಶಿಕ್ಷಣ ಪರೀಕ್ಷಾ ಮಂಡಳಿರವರ ಏಕ ಕಡತ ಸಂಖ್ಯೆ: ವೈ–2(ಇಪ) ಶು.ಪ. 09/2010–11

**ಪ್ರಸ್ತಾವನೆ :**

ಮೇಲೆ (1) ರಲ್ಲಿ ಓದಲಾದ ಪತ್ರದಲ್ಲಿ ಡಿ.ಇಡಿ ಪರೀಕ್ಷೆಗೆ ಸಂಬಂಧಿಸಿದಂತೆ, ಮೌಲ್ಯಮಾಪನ ದರಗಳನ್ನು ಪರಿಷ್ಕರಿಸಿ ಅನುಮತಿ ನೀಡಲಾಗಿತ್ತು. ಮೇಲೆ (2) ರಲ್ಲಿ ಓದಲಾದ ಏಕ ಕಡತದಲ್ಲಿ ನಿರ್ದೇಶಕರು (ಇತರೆ ಪರೀಕ್ಷೆಗಳು), ಕರ್ನಾಟಕ ಪ್ರೌಢಶಿಕ್ಷಣ ಪರೀಕ್ಷಾ ಮಂಡಳಿ ರವರು ಪರಿಷ್ಕರಿಸಿದ ದರ ಪಟ್ಟಿಯನ್ನು ಸಿದ್ಧಪಡಿಸಿ ಸರ್ಕಾರದ ಅನುಮೋದನೆಗೆ ಸಲ್ಲಿಸಿರುತ್ತಾರೆ. ನಿರ್ದೇಶಕರು (ಇತರೆ ಪರೀಕ್ಷೆಗಳು), ರವರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಇಡಿ 315 ಪಿಟಿಐ 2010, ಬೆಂಗಳೂರು, ದಿನಾಂಕ : 16–09–2010**

ಈ ಹಿಂದಿನ ಎಲ್ಲಾ ಆದೇಶಗಳನ್ನು ರದ್ದುಪಡಿಸಿದೆ. ಕರ್ನಾಟಕ ಪ್ರೌಢಶಿಕ್ಷಣ ಪರೀಕ್ಷಾ ಮಂಡಳಿಯು ಪ್ರಸ್ತಾಪಿಸಿರುವಂತೆ ಆಗಸ್ಟ್ 2010 ಪ್ರಥಮ, ದ್ವಿತೀಯ ಡಿ.ಇಡಿ ಮತ್ತು ಪಿ.ಪಿ.ಟಿ. ಪರೀಕ್ಷೆಗಳಿಗೆ ಸಂಬಂಧಿಸಿದಂತೆ, ಈ ಕೆಳಕಂಡ ಷರತ್ತಿಗೊಳಪಟ್ಟು ಮೌಲ್ಯಮಾಪನ ದರಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಕೆಳಗಿನಂತೆ ಪರಿಷ್ಕರಿಸಿ ಆದೇಶಿಸಿದೆ.

| ಕ್ರ ಸಂ. | ಸಿಬ್ಬಂದಿ ವಿವರ | ಹಾಲಿ ಜಾರಿಯಲ್ಲಿರುವ ಸಂಭಾವನೆ (ಡಿ.ಇಡಿ) ದರ ರೂ. | ಪರಿಷ್ಕರಿಸ ಬೇಕಾದ ದರ |
|---|---|---|---|
| 1 | ಅ. ಜಂಟಿ ಮುಖ್ಯ ಪರಿವೀಕ್ಷಕರಿಗೆ ಸಂಭಾವನೆ<br>ಆ. ಪರಿಶೀಲನಾ ಶುಲ್ಕ | 2000-00<br>800-00 | 3000-00<br>1000-00 |
| | ಇ. ಉಪ ಮುಖ್ಯ ಪರೀಕ್ಷಕರಿಗೆ ಸಂಭಾವನೆ<br>ಈ. ಪರಿಶೀಲನಾ ಶುಲ್ಕ | 1800-00<br>350-00 | 2500-00<br>500-00 |
| | ಉ. ಶಿಬಿರಾಧಿಕಾರಿ | 2000-00 | 2500-00 |
| 2 | ಉತ್ತರ ಪತ್ರಿಕೆಗಳ ಮೌಲ್ಯಮಾಪನ ದರ 3 ಘಂಟೆ ಅವಧಿಗೆ | 09-00 | 12-00 |
| 3 | **ಮೌಲ್ಯಮಾಪಕರ ದಿನಭತ್ಯೆ** | | |
| | ಅ. ಬೆಂಗಳೂರು ನಗರಕ್ಕೆ | 210-00 | 270-00 |
| | ಆ. ಇತರೆ ಸ್ಥಳಗಳಿಗೆ | 190-00 | 230-00 |
| 4 | **ಸ್ಥಳೀಯ ವಾಹನ ಭತ್ಯೆ** | | |
| | ಅ. ಬೆಂಗಳೂರು ನಗರಕ್ಕೆ | 80-00 | 110-00 |
| | ಆ. ಇತರೆ ಸ್ಥಳಗಳಿಗೆ | 60-00 | 90-00 |
| 5 | ಉತ್ತರ ಪತ್ರಿಕೆಗಳ ಮೌಲ್ಯಮಾಪನ ಕೇಂದ್ರದ ಸಹಾಯಕರು | --- | 500-00 |
| 6 | ಉತ್ತರ ಪತ್ರಿಕೆಗಳ ಮೌಲ್ಯಮಾಪನ ಕೇಂದ್ರದ ಡಿ ಗ್ರೂಪ್ ನೌಕರರಿಗೆ | --- | 250-00 |

**ಷರತ್ತುಗಳು :**

1. ಸದರಿ ಪರಿಷ್ಕರಣೆಯಿಂದ ಉಂಟಾಗುವ ಹೆಚ್ಚುವರಿ ವೆಚ್ಚವನ್ನು ಮಂಡಳಿ ತನ್ನ ಸ್ವಂತ ಸಂಪನ್ಮೂಲಗಳಿಂದಲೇ ಭರಿಸತಕ್ಕದ್ದು:
2. ಇನ್ನು ಮುಂದೆ, ಇಂತಹ ಪರಿಷ್ಕರಣೆಯನ್ನು ಸಂಬಂಧಿಸಿದ ವಿನಿಯಮಗಳನ್ನು ರಚಿಸುವ ಅಥವಾ ಅದಕ್ಕೆ ತಿದ್ದುಪಡಿ ಮಾಡುವ ಮೂಲಕವೇ ಮಾಡಬೇಕು;
3. ಪರೀಕ್ಷಾ ಶುಲ್ಕಗಳ ಹಾಗೂ ಪರೀಕ್ಷಾ ಕಾರ್ಯಗಳಿಗೆ ತೊಡಗಿಸಲ್ಪಡುವವರಿಗೆ ನೀಡುವ ಸಂಭಾವನೆಗಳ ದರಗಳ ಪರಿಷ್ಕರಣೆ ಇನ್ನು ಮುಂದೆ ಪ್ರತಿ ಮೂರು ವರ್ಷಗಳಿಗೊಮ್ಮೆ ಮಾಡತಕ್ಕದ್ದು (ಅದಕ್ಕಿಂತ ಪೂರ್ವದಲ್ಲಿ ಮಾಡತಕ್ಕದ್ದಲ್ಲ)

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎನ್. ಸೋಮಶೇಖರ್**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 2416 ಶಿಕ್ಷಣ ಇಲಾಖೆ.

## ಕಾರ್ಮಿಕ ಸಚಿವಾಲಯ

**ವಿಷಯ :** ಉಪ ಪ್ರಾದೇಶಿಕ ಉದ್ಯೋಗ ವಿನಿಮಯ ಕೇಂದ್ರ, ಬೆಂಗಳೂರು ಇಲ್ಲಿನ ಉದ್ಯೋಗಾಧಿಕಾರಿ ಹುದ್ದೆಯನ್ನು ವಿಶಿಷ್ಟ ವೃತ್ತಿ ಮತ್ತು ಕಾರ್ಯನಿರ್ವಾಹಕ ಉದ್ಯೋಗ ವಿನಿಮಯ ಕೇಂದ್ರ, ಬೆಂಗಳೂರು ಇಲ್ಲಿಗೆ ಸ್ಥಳಾಂತರಿಸಿ ಅಧಿಕಾರ ಪ್ರತ್ಯಾಯೋಜಿಸುವ ಬಗ್ಗೆ.

**ಓದಲಾಗಿದೆ :** ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆ ಇವರ ಪತ್ರ ಸಂ. ಉತನಿ/ಉದ್ಯೋಗ/ ಆಡಳಿತ-1/ವಿವ-72/ 2009-10 ದಿನಾಂಕ: 08/06/2010

**ಪ್ರಸ್ತಾವನೆ :**

ಮೇಲೆ ಓದಲಾದ ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆ ಇವರ ಪತ್ರದಲ್ಲಿ ಉಪ ಪ್ರಾದೇಶಿಕ ಉದ್ಯೋಗ ವಿನಿಮಯ ಕೇಂದ್ರ, ಬೆಂಗಳೂರು ಇಲ್ಲಿಗೆ ಮಂಜೂರಾಗಿರುವ ಒಂದು ಉದ್ಯೋಗಾಧಿಕಾರಿ ಹುದ್ದೆಯನ್ನು ವಿಶಿಷ್ಟ ವೃತ್ತಿ ಮತ್ತು ಕಾರ್ಯನಿರ್ವಾಹಕ ಉದ್ಯೋಗ ವಿನಿಮಯ ಕೇಂದ್ರ, ಬೆಂಗಳೂರು ಇಲ್ಲಿಗೆ ಸ್ಥಳಾಂತರಿಸುವ ಮೂಲಕ ಪುನರ್ ವಿನ್ಯಾಸಗೊಳಿಸಬೇಕಿದೆ ಎಂದೂ, ವಿಶಿಷ್ಟ ವೃತ್ತಿ ಮತ್ತು ಕಾರ್ಯನಿರ್ವಾಹಕ ಉದ್ಯೋಗ ವಿನಿಮಯ ಕೇಂದ್ರ, ಬೆಂಗಳೂರು ಈ ಕೇಂದ್ರದ ಸಹಾಯಕ ನಿರ್ದೇಶಕರಿಗೆ ದತ್ತವಾಗಿರುವ ಆಡಳಿತಾತ್ಮಕ ಅಧಿಕಾರ, ಹಣ ತೆಗೆಯುವ ಮತ್ತು ಬಟವಾಡೆ ಮಾಡುವ ಅಧಿಕಾರವನ್ನು ಸ್ಥಳಾಂತರಿಸಲಾಗುವ ಉದ್ಯೋಗಾಧಿಕಾರಿ ಹುದ್ದೆಗೆ ಮಂಜೂರು ಮಾಡಿ ಸರ್ಕಾರಿ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ : ಕಾಇ 38 ಇಟಿಎಕ್ಸ್ 2010, ಬೆಂಗಳೂರು, ದಿನಾಂಕ : 16/09/2010.**

ಉಪ ಪ್ರಾದೇಶಿಕ ಉದ್ಯೋಗ ವಿನಿಮಯ ಕೇಂದ್ರ, ಬೆಂಗಳೂರು ಇಲ್ಲಿಗೆ ಮಂಜೂರಾಗಿರುವ ಒಂದು ಉದ್ಯೋಗಾಧಿಕಾರಿ ಹುದ್ದೆಯನ್ನು ವಿಶಿಷ್ಟ ವೃತ್ತಿ ಮತ್ತು ಕಾರ್ಯನಿರ್ವಾಹಕ ಉದ್ಯೋಗ ವಿನಿಮಯ ಕೇಂದ್ರ, ಬೆಂಗಳೂರು ಇಲ್ಲಿಗೆ ಸ್ಥಳಾಂತರಿಸಲಾಗಿದೆ ಅಲ್ಲದೆ ವಿಶಿಷ್ಟ ವೃತ್ತಿ ಮತ್ತು ಕಾರ್ಯನಿರ್ವಾಹಕ ಉದ್ಯೋಗ ವಿನಿಮಯ ಕೇಂದ್ರ, ಬೆಂಗಳೂರು ಇಲ್ಲಿನ ಸಹಾಯಕ ನಿರ್ದೇಶಕರಿಗೆ ದತ್ತವಾಗಿರುವ ಆಡಳಿತಾತ್ಮಕ ಅಧಿಕಾರ, ಹಣ ತೆಗೆಯುವ ಮತ್ತು ಬಟವಾಡೆ ಮಾಡುವ ಅಧಿಕಾರವನ್ನು ಸ್ಥಳಾಂತರಿಸಲಾದ ಉದ್ಯೋಗಾಧಿಕಾರಿ ಹುದ್ದೆಗೆ ಪ್ರತ್ಯಾಯೋಜಿಸಲು ಮಂಜೂರಾತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎಸ್. ವಿಶ್ವೇಶ್ವರಯ್ಯ**

ಪೀಠಾಧಿಕಾರಿ,

ಪಿ.ಆರ್. 2417 ಕಾರ್ಮಿಕ ಇಲಾಖೆ. (ಉದ್ಯೋಗ ಮತ್ತು ತರಬೇತಿ)

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ :** ಸುವರ್ಣ ವಸ್ತ್ರ ನೀತಿ 2008–2013ರಡಿ ಜವಳಿ / ಸಿದ್ಧ ಉಡುಪು ಬೃಹತ್ ಯೋಜನೆಗಳ ಸ್ಥಾಪನೆ – "ನೋಡಲ್ ಅಧಿಕಾರಿ"ಯನ್ನು ನೇಮಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ: ವಾಕೈ 21 ಜವಿಮ 2009, ದಿನಾಂಕ: 03.03.2010.

2. ಮಾನ್ಯ ಜವಳಿ, ಯುವಜನ ಸೇವೆ ಮತ್ತು ಕ್ರೀಡಾ ಸಚಿವರ ಟಿಪ್ಪಣಿ ಸಂಖ್ಯೆ: ಜ.ಯು.ಕ್ರೀ/1571, ದಿನಾಂಕ: 19.08.2010.

**ಪ್ರಸ್ತಾವನೆ :**

ಸುವರ್ಣ ವಸ್ತ್ರ ನೀತಿ ಯೋಜನೆಯಡಿ ವಲಯ–(1) ಮತ್ತು (2)ರಲ್ಲಿ ಒಂದೇ ಯೋಜನೆಗಾಗಿ ಬಂಡವಾಳ ವೆಚ್ಚದ ಸಲುವಾಗಿ ರೂ.100ಕೋಟಿ ಮತ್ತು ಅದಕ್ಕೂ ಹೆಚ್ಚಿನ ಹೂಡಿಕೆ ಮಾಡುವ ಹಾಗೂ ಕನಿಷ್ಠ 500 ನೇರ ಉದ್ಯೋಗಾವಕಾಶಗಳನ್ನು ಕಲ್ಪಿಸುವ ಜವಳಿ ಮತ್ತು ಉಡುಪು ತಯಾರಿಕ ಘಟಕಗಳನ್ನು ಬೃಹತ್ ಯೋಜನೆಯೆಂದು ವರ್ಗೀಕರಿಸಿ, ಈ ಬೃಹತ್ ಯೋಜನೆಗಳಿಗೆ ಪ್ರತ್ಯೇಕವಾಗಿ ಪ್ರಕರಣಗಳನ್ನು ಆಧರಿಸಿ, ವಿಶೇಷ ನೆರವು ಒದಗಿಸಲಾಗುವುದೆಂದು ತಿಳಿಸಲಾಗಿದೆ.

ಸುವರ್ಣ ವಸ್ತ್ರ ನೀತಿ ಅನುಷ್ಠಾನಕ್ಕೆ ಸರ್ಕಾರವು ಉನ್ನತ ಮಟ್ಟದ ಅಧಿಕಾರಯುಕ್ತ ಸಮಿತಿ, ರಾಜ್ಯ ಮಟ್ಟದ ಯೋಜನಾ ಅನುಷ್ಠಾನ ಸಮಿತಿ ಹಾಗೂ ಜಿಲ್ಲಾ ಮಟ್ಟದ ಯೋಜನಾ ಉಸ್ತುವಾರಿ ಸಮಿತಿಗಳನ್ನು ಅಲ್ಲದೆ, ಸಿದ್ಧ ಉಡುಪು ವಲಯಗಳ ಸ್ಥಾಪನೆಗೆ ಕಾರ್ಯಪಡೆ ಸಮಿತಿ ಹಾಗೂ ಸಲಹಾ ಸಮಿತಿಗಳನ್ನು ರಚಿಸಿದೆ.

ರಾಜ್ಯ ಹಾಗೂ ಹೊರ ರಾಜ್ಯದ ಉದ್ದಿಮೆದಾರರನ್ನು ಆಕರ್ಷಿಸಿ, ಮೆಗಾ ಯೋಜನೆಗಳ ಅನುಷ್ಠಾನಕ್ಕೆ ಕ್ರಮವಹಿಸಲು ಸರ್ಕಾರವು ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ಸಮನ್ವಯ ಸಮಿತಿಯನ್ನು ರಚಿಸಿದೆ. ಈ ವಿಷಯವನ್ನು ಸರ್ಕಾರವು ಪುನರ್ ಪರಿಶೀಲಿಸಿದ್ದು, ರಾಜ್ಯದಲ್ಲಿ ಮೆಗಾ ಯೋಜನೆಗಳ ಸ್ಥಾಪನೆಗೆ ಅನುಕೂಲವಾಗುವಂತೆ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ವಿದ್ಯುತ್ ಮಗ್ಗಗಳ ಅಭಿವೃದ್ಧಿ ನಿಗಮ ನಿಯಮಿತ, ಇವರನ್ನು "ನೋಡಲ್ ಅಧಿಕಾರಿ" ಯನ್ನಾಗಿ ನೇಮಿಸುವುದು ಅವಶ್ಯಕವೆಂದು ಕಂಡುಬಂದಿದ್ದು, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ 25 ಜವಿಮ 2010, ಬೆಂಗಳೂರು, ದಿನಾಂಕ: 15–09–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಹಾಗೂ ದಿ: 03.03.2010ರ ಸರ್ಕಾರಿ ಆದೇಶ ಸಂಖ್ಯೆ: ವಾಕೈ 21 ಜವಿಮ 2009ನ್ನು ರದ್ದುಗೊಳಿಸುತ್ತಾ, ರಾಜ್ಯದ ಹಾಗೂ ಹೊರ ರಾಜ್ಯದ ಉದ್ದಿಮೆದಾರರನ್ನು ಆಕರ್ಷಿಸಿ, ಮೆಗಾ ಯೋಜನೆಗಳ ಅನುಷ್ಠಾನಕ್ಕೆ ಕ್ರಮವಹಿಸಲು ಸರ್ಕಾರವು, ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ವಿದ್ಯುತ್ ಮಗ್ಗಗಳ ಅಭಿವೃದ್ಧಿ ನಿಗಮ ನಿಯಮಿತ, ಇವರನ್ನು "ನೋಡಲ್ ಅಧಿಕಾರಿ" ಯನ್ನಾಗಿ ನೇಮಿಸಿದೆ.

"ನೋಡಲ್ ಅಧಿಕಾರಿ"ಯು ಈ ಕೆಳಕಂಡ ಉಲ್ಲೇಖ ಮತ್ತು ನಿಬಂಧನೆಗಳ ಅಡಿ ಕಾರ್ಯನಿರ್ವಹಿಸತಕ್ಕದ್ದು:–

1) ರಾಜ್ಯ ಮತ್ತು ಹೊರ ರಾಜ್ಯದ ಜವಳಿ ಉದ್ದಿಮೆದಾರರ ಜೊತೆ ಸಂಪರ್ಕ ಬೆಳೆಸಿ, ಕರ್ನಾಟಕದಲ್ಲಿ ವಿಶೇಷವಾಗಿ ದೊರಕುವ ಪ್ರೋತ್ಸಾಹಕಗಳನ್ನು ಮನದಟ್ಟು ಮಾಡಿ, ಕರ್ನಾಟಕದಲ್ಲಿ ಉದ್ದಿಮೆ ಸ್ಥಾಪಿಸಲು ಕ್ರಮಕೈಗೊಳ್ಳುವುದು.
2) ವಿವಿಧ ಇಲಾಖೆಗಳ ಜೊತೆಗೆ ಸಂಪರ್ಕ ಬೆಳೆಸಿ ಉದ್ದಿಮೆದಾರರಿಗೆ ಉದ್ದಿಮೆ ಸ್ಥಾಪಿಸಲು escort service ಒದಗಿಸುವುದು.
3) ಸರ್ಕಾರದ ಮಟ್ಟದಲ್ಲಿ ವಿವಿಧ ಇಲಾಖೆಗಳಲ್ಲಿ ತ್ವರಿತ ಅನುಮೋದನೆಗಳನ್ನು ಪಡೆಯಲು ಇಲಾಖಾ ಪ್ರತಿನಿಧಿಯಾಗಿ ಕೆಲಸ ನಿರ್ವಹಿಸುವುದು.
4) ಉದ್ದಿಮೆಗೆ ಬೇಕಾದ ಜಮೀನನ್ನು ಹಂಚಿಕೆ ಪಡೆಯಲು ಕೆ.ಐ.ಎ.ಡಿ.ಬಿ/ಜಿಲ್ಲಾಧಿಕಾರಿಗಳ ಜೊತೆಗೆ ಪತ್ರ ವ್ಯವಹಾರ ಮಾಡುವುದು.
5) ಕರ್ನಾಟಕ ಉದ್ಯೋಗ ಮಿತ್ರ ಸಂಸ್ಥೆಯು Single Window Agency ಮೂಲಕ ಸಂಬಂಧಪಟ್ಟ ಮಂಜೂರಾತಿ, ಅನುಮೋದನೆ ಮುಂತಾದವುಗಳ ಕಾರ್ಯ ನಿರ್ವಹಣೆಯನ್ನು ಹೇಗೆ ನಿರ್ವಹಿಸುತ್ತಿದೆಯೋ ಅದೇ ಮಾದರಿಯಲ್ಲಿ ಜವಳಿ ಉದ್ದಿಮೆಗೆ ಸಂಬಂಧಪಟ್ಟ ಮಂಜೂರಾತಿ, ಅನುಮೋದನೆ ಮುಂತಾದವುಗಳ ಕಾರ್ಯನಿರ್ವಹಣೆಯನ್ನು ಕರ್ನಾಟಕ ರಾಜ್ಯ ವಿದ್ಯುತ್ ಮಗ್ಗಗಳ ಅಭಿವೃದ್ಧಿ ನಿಗಮ ಸಂಸ್ಥೆ ನಿರ್ವಹಿಸುವ ಅಧಿಕಾರವನ್ನು ನೀಡುವುದು ಹಾಗೂ ಇದಕ್ಕೆ ಶುಲ್ಕವನ್ನು ಪಡೆಯಲು ಅನುಮೋದಿಸುವುದು.
6) ಈ ನಿಟ್ಟಿನಲ್ಲಿ ಸಾಧಿಸಿದ ಪ್ರಗತಿಯನ್ನು ಮೇಲಿಂದ ಮೇಲೆ ನೇರವಾಗಿ ಸರ್ಕಾರದ ಕಾರ್ಯದರ್ಶಿಗಳು, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ ಹಾಗೂ ಜವಳಿ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು, ಕೈಮಗ್ಗ ಮತ್ತು ಜವಳಿ, ಇವರಿಗೆ ವರದಿ ನೀಡುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಗಣಪತಿ**

ಸರ್ಕಾರದ ಉಪ ಕಾರ್ಯದರ್ಶಿ,

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

ಪಿ.ಆರ್. 2418

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಎನ್ ಆರ್ ನಾಗರಾಜು, ಕೆಎಎಸ್ (ಕಿರಿಯ ಶ್ರೇಣಿ), ಹಿಂದಿನ ವಿಶೇಷ ಭೂ ಸ್ವಾಧೀನಾಧಿಕಾರಿ, ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ, ಗಾಂಧಿನಗರ, ಬೆಂಗಳೂರು ಇವರ ವಿರುದ್ಧ ಲಂಚ ನಿರೋಧ ಕಾಯ್ದೆ, 1988 ರಡಿ ದಾಖಲಾದ ಪ್ರಕರಣದ ಅಭಿಯೋಜನಾ ಮಂಜೂರಾತಿ–ಪರಿಷ್ಕೃತ ಆದೇಶ

**ಓದಲಾಗಿದೆ :** 1) ಆರಕ್ಷಕ ನಿರೀಕ್ಷಕರು ಹಾಗೂ ತನಿಖಾಧಿಕಾರಿಗಳು ನಗರ ವಿಭಾಗ, ಬೆಂಗಳೂರು, ಕರ್ನಾಟಕ ಲೋಕಾಯುಕ್ತ ಇವರ ವರದಿ ದಿನಾಂಕ: 04–08–10

2) ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ದಿನಾಂಕ: 06–08–10ರ ಪತ್ರ ಮತ್ತು ಅಂತಿಮ ವರದಿ ಸಂಖ್ಯೆ: Lok/INV(G)/City/Crime-24/2010

**ಪ್ರಸ್ತಾವನೆ :**

ಶ್ರೀ ಎನ್.ಆರ್.ನಾಗರಾಜು, ಹಿಂದಿನ ವಿಶೇಷ ಭೂ ಸ್ವಾಧೀನಾಧಿಕಾರಿ, ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ, ಬೆಂಗಳೂರು ಇವರ ವಿರುದ್ಧ ಮೊಕದ್ದಮೆ ಸಂಖ್ಯೆ: 24/2010 ರಲ್ಲಿ ಆರಕ್ಷಕ ನಿರೀಕ್ಷಕರು, ಬೆಂಗಳೂರು ನಗರ ವಿಭಾಗ, ಕರ್ನಾಟಕ ಲೋಕಾಯುಕ್ತ ಪೊಲೀಸು ಠಾಣೆಯಲ್ಲಿ ದಾಖಲಿಸಿರುವ ಪ್ರಕರಣದ ತನಿಖಾಧಿಕಾರಿಯ ಅಂತಿಮ ವರದಿ ಮತ್ತು ತನಿಖಾ ದಾಖಲಾತಿಗಳನ್ನು ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ತಮ್ಮ ಪತ್ರ ದಿನಾಂಕ: 06–08–10 (ಮೇಲೆ ಓದಲಾದ ಕ್ರಮಸಂಖ್ಯೆ–2)ರೊಂದಿಗೆ ಕಳುಹಿಸುತ್ತಾ, ಆಪಾದಿತನನ್ನು ಘನ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಲಂಚ ನಿರೋಧಕ ಕಾಯ್ದೆ, 1988 ರ 19 ಕಲಂನಡಿ ಮಂಜೂರಾತಿಗಾಗಿ ಸರ್ಕಾರವನ್ನು ಕೋರಿರುತ್ತಾರೆ.

2 ಸಕ್ಷಮ ಪ್ರಾಧಿಕಾರಿಯಾದ ಸರ್ಕಾರವು, ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಪೋಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ತಮ್ಮ ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಪತ್ರ ಸಂಖ್ಯೆ: Lok/INV(G) / City / Crime-24/2010, ದಿನಾಂಕ: 06–08–10 ರೊಂದಿಗೆ ಕಳುಹಿಸಿಕೊಟ್ಟ ಈ ಕೆಳಕಂಡ ದಾಖಲಾತಿಗಳನ್ನು ಪರಿಶೀಲಿಸಿದೆ.

1. ಶ್ರೀ ಎ ರುಕ್ಮಾಂಗದ ಬಿನ್ ಲೇಟ್ ಅಪ್ಪಾದೊರೈನಾಯ್ಡು, ನಂ. 440, 5ನೇ ಕ್ರಾಸ್, 10ನೇ ಮೈನ್, ವಿವೇಕನಗರ, ಬೆಂಗಳೂರು–47 ರವರ ಫಿರ್ಯಾದಿ ದಿನಾಂಕ: 28–06–10
2. ಪ್ರಥಮ ವರ್ತಮಾನ ವರದಿ ಬೆಂಗಳೂರು ನಗರ ವಿಭಾಗ ಲೋಕಾಯುಕ್ತ ಪೊಲೀಸ್ ಠಾಣೆ ಪ್ರಕರಣ ಸಂಖ್ಯೆ: 242010
3. ಪ್ರಾಯೋಗಿಕ ಪಂಚನಾಮೆ ದಿನಾಂಕ: 28–06–10
4. ಟ್ರ್ಯಾಪ್ ಮಹಜರ್ ದಿನಾಂಕ: 28–06–10
5. ರಾಸಾಯನಿಕ ಪರೀಕ್ಷಕರ ಪರೀಕ್ಷಣಾ ವರದಿ ಸಂಖ್ಯೆ: ಸಾಆಸಂ / ರಾಪ / ಲೋಕ್ /50/10–11, ದಿನಾಂಕ: 23–07–10
6. ಕೃತ್ಯ ನಡೆದ ಸ್ಥಳದ ನಕಾಶೆ: ಸಹಾಯಕ ಕಾರ್ಯಪಾಲಕ ಅಭಿಯಂತರವರ ಕಛೇರಿ, ನಂ 7ನೇ ಕಟ್ಟಡಗಳ ಉಪ ವಿಭಾಗ, ಬೆಂಗಳೂರು ಇವರ ಪತ್ರ ಸಂಖ್ಯೆ: ಸಕಾಅ:ಕಉವಿ7ಸ:ಅಕೃನಸ್ಥನ:2010–11 471–72, ದಿನಾಂಕ: 20–07–10 ರಲ್ಲಿ ಲಗತ್ತಿಸಿದೆ.
7. ಸಾಕ್ಷಿಗಳ ಹೇಳಿಕೆಗಳು: (1) ಶ್ರೀ ಎ ರುಕ್ಮಾಂಗದ (2) ಶ್ರೀ ನಾಗಭೂಷಣ (3) ಶ್ರೀ ಸಿ ವಿಶ್ವನಾಥ್ (4) ಶ್ರೀ ಎಸ್ ಮಲ್ಲಿಕಾರ್ಜುನ್ (5) ಶ್ರೀ ಟಿ ಶಂಕರಪ್ಪ (6) ಶ್ರೀಮತಿ ಎನ್ ಲಕ್ಷ್ಮಿ (7) ಶ್ರೀ ಬಿ ಎಂ ಮಹಾದೇವ (8) ಶ್ರೀ ಸೆಂದಿಲ್ ಕುಮಾರ್ (9) ಶ್ರೀ ವಿ ಎಸ್ ವಿಜಯಾನಂದ (10) ಶ್ರೀಮತಿ ಕಮಲ (11) ಶ್ರೀ ಶಶಿಕುಮಾರ್ (12) ಶ್ರೀ ಬಾಲರಾಜ್ (13) ಶ್ರೀ ದೇಶಿಕ (14) ಶ್ರೀ ಕೆ ರಮೇಶ (15) ಶ್ರೀ ಸಿ ವೆಂಕಟೇಶ (16) ಶ್ರೀಮತಿ ಎಂ ಮಮತ (17) ಶ್ರೀ ದಯಾನಂದ (18) ಶ್ರೀ ಟಿ ಡಿ ಚಂದ್ರಶೇಖರ್ (19) ಶ್ರೀ ರಾಮಯ್ಯ (20) ಶ್ರೀ ಜಗದೀಶ್ವರ್ (21) ಶ್ರೀ ರವೀಂದ್ರ ಮತ್ತು (22) ಶ್ರೀ ರವಿಶಂಕರ್
8. ಲಂಚ ಕೇಳಲು ಆಧಾರವಾದ ಕಡತ ಅಥವಾ ದಾಖಲೆಗಳ ಸಂಖ್ಯೆ: Form No. 16A (ತನಿಖಾ ವರದಿಯ D-16) ವಿಷಯ: ಫಿರ್ಯಾದುದಾರರಿಗೆ ಪರಿಹಾರದ ಧನ ಪಾವತಿ ಮಾಡಿರುವ ಬಾಬ್ತು ಆದಾಯ ತೆರಿಗೆ ಕಠಾವು ಮಾಡಿರುವ TDS ಪ್ರಮಾಣ ಪತ್ರ ನೀಡುವ ಬಗ್ಗೆ
9. ಆಪಾದಿತರ ಸಮಜಾಯಿಷಿ ಹೇಳಿಕೆಗಳು: ಶ್ರೀ ಎನ್ ಆರ್ ನಾಗರಾಜು ಮತ್ತು ಶ್ರೀ ನಾಗಭೂಷಣ (ತನಿಖಾ ವರದಿ ಪುಟ 193–195 (D-24)

3 ತನಿಖಾಧಿಕಾರಿಗಳಾದ ಶ್ರೀ ಲಕ್ಷ್ಮೀನಾರಾಯಣ, ಕರ್ನಾಟಕ ಲೋಕಾಯುಕ್ತ ಪೊಲೀಸು ನಿರೀಕ್ಷಕರು, ನಗರ ವಿಭಾಗ, ಬೆಂಗಳೂರು ಇವರು ಶ್ರೀ ಎನ್ ಆರ್ ನಾಗರಾಜು, ವಿಶೇಷ ಭೂ ಸ್ವಾಧೀನಾಧಿಕಾರಿ, ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ, ಗಾಂಧಿನಗರ, ಬೆಂಗಳೂರು ರವರ ವಿರುದ್ಧ ದಂಡಾರ್ಹ ಪ್ರಕರಣವನ್ನು ಕರ್ನಾಟಕ ಲೋಕಾಯುಕ್ತ ಬೆಂಗಳೂರು ವಿಭಾಗ ಪೊಲೀಸು ಠಾಣೆಯಲ್ಲಿ ಗುನ್ನೆ ಸಂಖ್ಯೆ: 24/2010 ರಲ್ಲಿ ಲಂಚ ನಿರೋಧಕ ಕಾಯ್ದೆ, 1988 ರ ಕಲಂ 7, 13(1)(d) ರ ಜೊತೆಯಲ್ಲಿ ಓದಲಾದ ಕಲಂ 13(2) ರಡಿಯಲ್ಲಿ ದಾಖಲಿಸಿಕೊಂಡಿರುತ್ತಾರೆ.

4 ಲೋಕಾಯುಕ್ತ ಪೊಲೀಸರು ಟ್ರ್ಯಾಪ್ ನಡೆಸುವ ಮುನ್ನ ಸಂಗ್ರಹಿಸಲಾಗಿದ್ದ ಮೊಬೈಲ್ ಸಂಭಾಷಣೆ ಸಿ ಡಿ ಮತ್ತು ಫಿರ್ಯಾದುದಾರರು ನೀಡಿದ ಇತರೆ ಸಾಕ್ಷ್ಯಾಧಾರಗಳ ಮೇಲೆ ಮೇಲ್ಕಂಡ ಆಪಾದಿತರ ಅಂದರೆ ಶ್ರೀ ಎನ್ ಆರ್ ನಾಗರಾಜ್, ವಿಶೇಷ ಭೂ ಸ್ವಾಧೀನಾಧಿಕಾರಿ ಇವರ ಕಛೇರಿಯಲ್ಲಿ ಪ್ರಥಮ ದರ್ಜೆ ಸಹಾಯಕರಾಗಿ ಕರ್ತವ್ಯ ನಿರ್ವಹಿಸುತ್ತಿರುವ ಶ್ರೀ ನಾಗಭೂಷಣ್ ರವರನ್ನು ತನಿಖಾಧಿಕಾರಿಗಳು ಬಲೆ ಬೀಸುವ ಮೊದಲು ಎಲ್ಲಾ ಔಚಿತ್ಯಪೂರ್ಣ ಕಾರ್ಯಗಳನ್ನು ನೆರವೇರಿಸಿದ ನಂತರ ದಿನಾಂಕ: 28–06–10 ರಂದು ವಿಶೇಷ ಭೂ ಸ್ವಾಧೀನಾಧಿಕಾರಿಗಳ ಕಛೇರಿ, ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ, ಗಾಂಧಿನಗರ, ಬೆಂಗಳೂರು ಇಲ್ಲಿ ಬೀಸಿದ ಟ್ರ್ಯಾಪ್ ಯಶಸ್ವಿಯಾಗಿ ಶ್ರೀ ನಾಗಭೂಷಣ್, ಪ್ರಥಮ ದರ್ಜೆ ಸಹಾಯಕ, ವಿಶೇಷ ಭೂ ಸ್ವಾಧೀನಾಧಿಕಾರಿಗಳ ಕಛೇರಿ, ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ, ಗಾಂಧಿನಗರ, ಬೆಂಗಳೂರು ಇವರು ಅಕ್ರಮ ಸಂಭಾವನೆಯಾದ ಒಂದು ಲಕ್ಷ ರೂಪಾಯಿಗಳನ್ನು ಸದರಿ ಸರ್ಕಾರಿ ಕೆಲಸವನ್ನು ಮಾಡಲು ಕೇಳಿ ಪಡೆಯುತ್ತಿದ್ದಾಗ ಸಿಕ್ಕಿಹಾಕಿಕೊಂಡಿರುತ್ತಾರೆ. ಆಪಾದಿತ ಸಾರ್ವಜನಿಕ ನೌಕರರ ಬಲಗೈ ಮತ್ತು ಲಂಚದ ಹಣವನ್ನು ಇಟ್ಟುಕೊಂಡಿದ್ದ ಆಪಾದಿತರ ಪ್ಯಾಂಟ್‌ನ ಬಲ ಹಿಂಭಾಗದ ಜೇಬನ್ನು ಸೋಡಿಯಂ ಕಾರ್ಬೋನೇಟ್

ದ್ರಾವಣದಲ್ಲಿ ಮಾರ್ಜನೆ ಮಾಡಿ ಹಾಗೂ ಫಿನಾಪ್ತಲೀನ್ ಪರೀಕ್ಷೆಗೆ ಒಳಪಡಿಸಿಕೊಂಡು ಸಕಾರಾತ್ಮಕವೆಂದು ದೃಢೀಕರಿಸಿಕೊಂಡು ರಾಸಾಯನಿಕ ತಜ್ಞರ ಪರಿವೀಕ್ಷಣಾ ವರದಿಯಿಂದಲೂ ಸಹ ದೃಢಪಟ್ಟಿರುತ್ತದೆ. ಅಕ್ರಮ ಸಂಭಾವನೆಯಾದ ಒಂದು ಲಕ್ಷ ರೂಪಾಯಿಗಳನ್ನು ಶ್ರೀ ನಾಗಭೂಷಣ ರವರಿಂದ ಕಛೇರಿ ಸ್ಥಳದಲ್ಲಿ ಪಂಚರ ಸಮಕ್ಷಮ ವಶಪಡಿಸಿಕೊಳ್ಳಲಾಗಿದೆ.

5 ಮೇಲ್ಕಂಡ ತನಿಖಾ ವರದಿಯನ್ನು ಸಕ್ಷಮ ಪ್ರಾಧಿಕಾರವು ಕೂಲಂಕಷವಾಗಿ ಪರಿಶೀಲಿಸಿದೆ. ಒಂದನೇ ಆರೋಪಿಯಾದ ಶ್ರೀ ನಾಗಭೂಷಣ ರವರು ಎರಡನೇ ಆರೋಪಿಯಾದ ಶ್ರೀ ಎನ್ ಆರ್ ನಾಗರಾಜು ರವರಿಗೆ ಲಂಚದ ಹಣದಲ್ಲಿ ಐವತ್ತು ಸಾವಿರ ಹಣವನ್ನು ನೀಡುತ್ತಿದ್ದುದಾಗಿಯೂ ಉಳಿದ ಹಣವನ್ನು ತಾವೇ ಇಟ್ಟುಕೊಳ್ಳುತ್ತಿದ್ದುದಾಗಿಯೂ ತನಿಖಾಧಿಕಾರಿಯು ಲಗತ್ತು ಸಾಕ್ಷ್ಯಾಧಾರಗಳನ್ನು ಉಲ್ಲೇಖಿಸಿ ನೀಡಿರುವ ವರದಿಯನ್ನು ಹಾಗೂ ಶ್ರೀ ಸಂತೋಷ್ ಎಂಬ ಖಾಸಗೀ ವ್ಯಕ್ತಿಯು ಶ್ರೀ ನಾಗರಾಜ್ ರವರ ಪರವಾಗಿ ಹಣ ತಲುಪಿಸುವ ಕಾರ್ಯನಿರ್ವಹಿಸುತ್ತಿದ್ದರು ಎಂಬ ಆರೋಪಗಳನ್ನು ಮತ್ತು ಟ್ರ್ಯಾಪ್ ಮೊದಲು ಸಂಗ್ರಹಿಸಿದ ಮೊಬೈಲ್ ದೂರವಾಣಿ ಸಂಭಾಷಣೆ ಮತ್ತು ಟ್ರ್ಯಾಪ್ ಸಮಯದಲ್ಲಿ ಮುದ್ರಿಸಿರುವ digital voice record ಇತ್ಯಾದಿ ಸಾಕ್ಷ್ಯಾಧಾರಗಳನ್ನು ತನಿಖಾಧಿಕಾರಿಯು ಸಲ್ಲಿಸಿರುವುದನ್ನು ಪರಿಶೀಲಿಸಿ, ಕಂಡಿಕೆ 2 ರಲ್ಲಿರುವ ಪೂರಕ ದಾಖಲೆಗಳನ್ನು ಪರಿಶೀಲಿಸಿದ ನಂತರ ಶ್ರೀ ಎನ್ ಆರ್ ನಾಗರಾಜು ರವರನ್ನು ಲಂಚ ನಿರೋಧಕ ಕಾಯ್ದೆಯಡಿ ಅಭಿಯೋಜನೆಗೆ ಒಳಪಡಿಸಲು ಸಮರ್ಥನೀಯ ಕಾರಣಗಳು ಇರುವುದನ್ನು ಮನಗಂಡು ಸರ್ಕಾರವು, ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 024 ಕೆಇವಿ 10, ಬೆಂಗಳೂರು, ದಿನಾಂಕ : 31ನೇ ಆಗಸ್ಟ್, 2010**

ಆರೋಪಿಯಾದ ಶ್ರೀ ಎನ್ ಆರ್ ನಾಗರಾಜು, ವಿಶೇಷ ಭೂ ಸ್ವಾಧೀನಾಧಿಕಾರಿ, ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ, ಗಾಂಧಿನಗರ, ಬೆಂಗಳೂರು ಇವರನ್ನು ಲಂಚ ನಿರೋಧಕ ಕಾಯ್ದೆ 1988 ರ ಕಲಂ 7, 13(1)(d) ಜೊತೆಯಲ್ಲಿ ಓದಲಾದ 13(2) ರ ಪ್ರಕಾರ ಎಸಗಿರುವ ಶಿಕ್ಷಾರ್ಹ ಅಪರಾಧಕ್ಕಾಗಿ ಅಭಿಯೋಜನೆಗೊಳಪಡಿಸಲು ಲಂಚ ನಿರೋಧಕ ಕಾಯ್ದೆ 1988 ರ ಕಲಂ 19 ರನ್ವಯ ಈ ಮೂಲಕ ಮಂಜೂರಾತಿಯನ್ನು ನೀಡಿದೆ.

ಕರ್ನಾಟಕ ಸರ್ಕಾರದ (ವ್ಯವಹಾರ) ನಿಯಮಾವಳಿ, 1977 ರ ಪ್ರಕಾರ ಈ ಮೇಲ್ಕಂಡ ಆದೇಶವನ್ನು ನನ್ನ ಕಛೇರಿಯ ಮೊಹರು ಮತ್ತು ನನ್ನ ಸಹಿ ಅಡಿಯಲ್ಲಿ ದಿನಾಂಕ: 17–08–10 ರಂದು ಹೊರಡಿಸಿದೆ.

ಈ ಬಗ್ಗೆ ಈ ಮೊದಲು ಹೊರಡಿಸಲಾಗಿದ್ದ, ದಿನಾಂಕ: 17–08–10 ರ ಆದೇಶ ಸಂಖ್ಯೆ: ಸಿಆಸುಇ 024 ಕೆಇವಿ 10 ಅನ್ನು ರದ್ದುಗೊಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಡಾ: ಎಂ ಟಿ ರೇಜು**
ಸರ್ಕಾರದ ಉಪ ಕಾರ್ಯದರ್ಶಿ
ಸಿಆಸುಇ (ಸೇವೆಗಳು)

ಪಿ.ಆರ್. 2419

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ :** ಶ್ರೀ ಸಿ. ರವಿಶಂಕರ್, ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ ಇವರ ಪರೀಕ್ಷಾರ್ಥ ಅವಧಿಯನ್ನು ಘೋಷಿಸುವ ಬಗ್ಗೆ.

**ಓದಲಾಗಿದೆ :**
1) ಕರ್ನಾಟಕ ಆಡಳಿತ ನ್ಯಾಯಮಂಡಳಿಯ ಅರ್ಜಿ ಸಂಖ್ಯೆ 4055/2006 ರಲ್ಲಿ ದಿನಾಂಕ: 28/08/2006 ರಂದು ನೀಡಿರುವ ತೀರ್ಪು
2) ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಯವರ ಪತ್ರ ಸಂಖ್ಯೆ ಎ1–ಇಎಸ್‌ಟಿ–ಸಿಆರ್–39/2009–10. ದಿನಾಂಕ: 24/11/2009
3) ಕರ್ನಾಟಕ ಆಡಳಿತ ನ್ಯಾಯಮಂಡಳಿಯು ಅರ್ಜಿ ಸಂಖ್ಯೆ 2247/2009 ರಲ್ಲಿ ದಿ: 22/07/2010 ರಂದು ನೀಡಿರುವ ನಿರ್ದೇಶನ
4) ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಯವರ ಪತ್ರ ಸಂಖ್ಯೆ ಎ1–ಇಎಸ್‌ಟಿ–ಸಿಆರ್–09/2007–08, ದಿನಾಂಕ: 28/04/2010

**ಪ್ರಸ್ತಾವನೆ :**

ಕರ್ನಾಟಕ ಲೋಕಸೇವಾ ಆಯೋಗದ ಮೂಲಕ ರಾಜ್ಯ ಅರಣ್ಯ ಸೇವೆಯ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ ವೃಂದಕ್ಕೆ ಪರಿಶಿಷ್ಟ ಪಂಗಡ ಮೀಸಲಾತಿಯಡಿ ಆಯ್ಕೆಗೊಂಡಿರುವ ಶ್ರೀ ಸಿ. ರವಿಶಂಕರ್ ಇವರನ್ನು ಸರ್ಕಾರದ ಅಧಿಸೂಚನೆ ಸಂಖ್ಯೆ: ಅಪಜೀ 49 ಅತಶಿ 2004, ದಿನಾಂಕ: 26/04/2005 ರಲ್ಲಿ ಎರಡು ವರ್ಷದ Diploma in Forestry ತರಬೇತಿಗೆ ನಿಯೋಜಿಸಲಾಗಿತ್ತು.

ಕರ್ನಾಟಕ ಲೋಕಸೇವಾ ಆಯೋಗದಲ್ಲಿ ಅರ್ಹತೆಯಲ್ಲಿ ಹಿರಿಯರಾದ ಹಾಗೂ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ ಹುದ್ದೆಗೆ ಆಯ್ಕೆಯಾದ ಶ್ರೀ ಸಿ. ರವಿಶಂಕರ್ ಇವರು ಆಯ್ಕೆ ಪೂರ್ವದ ನಿಯಮದಂತೆ ಅಗತ್ಯವಿರುವ ವೈದ್ಯಕೀಯ ತಪಾಸಣೆಯಲ್ಲಿ ಯಶಸ್ವಿಯಾಗಿರುವುದರಿಂದ, ಹಾಗೂ slight impairment in the hearing and recommended for Audiological evaluations ಎಂದು ತಿಳಿಸಿರುವ ಕುರಿತು ನೇಮಕಾತಿ ಪ್ರಾಧಿಕಾರ ನಿರ್ಧರಿಸಿ ತೀರ್ಮಾನ ಕೈಗೊಳ್ಳಬೇಕಾಗಿತ್ತು. ಶ್ರೀ ಬಸಪ್ಪ ಡಿ. ಗುರಿಕಾರ ಇವರೂ ಕೂಡಾ ಪರಿಶಿಷ್ಟ ಪಂಗಡ ಮೀಸಲಾತಿಯಡಿಯಲ್ಲಿ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ ಹುದ್ದೆಗೆ ಅರ್ಜಿ ಸಲ್ಲಿಸಿದ್ದು, ಅಂತಿಮವಾಗಿ ಕರ್ನಾಟಕ ಲೋಕಸೇವಾ ಆಯೋಗದಿಂದ ಆಯ್ಕೆಗೊಂಡಿರಲಿಲ್ಲ. ಅದರಿಂದಾಗಿ ಶ್ರೀ ಸಿ. ರವಿಶಂಕರ್ ಇವರ ಆಯ್ಕೆಯನ್ನು ಪ್ರಶ್ನಿಸಿ ಶ್ರೀ ಬಿ.ಡಿ.ಗುರಿಕಾರ ಇವರು ಕರ್ನಾಟಕ ಆಡಳಿತ ನ್ಯಾಯಮಂಡಳಿಯಲ್ಲಿ ಅರ್ಜಿ ಸಂಖ್ಯೆ 4055/206 ನ್ನು ಸಲ್ಲಿಸಿದ್ದರು. ಕರ್ನಾಟಕ ಆಡಳಿತ ನ್ಯಾಯಮಂಡಳಿಯು ಈ ಪ್ರಕರಣದಲ್ಲಿ ದಿನಾಂಕ: 28/08/2006 ರಂದು ಈ ಕೆಳಕಂಡಂತೆ ತೀರ್ಪು ನೀಡಿರುತ್ತದೆ:–

> "…. Having regard to the fact that the 3rd respondent has passed the three prescribed tests and regarding slight impairment in the hearing, the Medical Officer has already recommended for

Audiological Evaluation, this Tribunal is of the view that the percentage of marks obtained by 3rd respondent as against the applicant is far more and the hearing impairment is always subjected to further Audiological Evaluation by the authorities and ultimately the probationary period is required to be declared by the statutory authorities, If the 3rd respondent does not complete the probationary period satisfactorily and if the official respondents do not declare the probationary period of the 3rd respondent satisfactorily, the 3rd respondent will not be continued in service. In that event, that post will fall vacant. If the post becomes vacant, the next successful candidate on merits is required to be considered for selection. If any such vacancy arises, the official respondents (Respondent-1 & 2) shall consider the claim of the applicant for the said post, if he is the next meritorious candidate after the 3rd respondent, in the above said recruitment."

ಈ ತೀರ್ಪಿನ ಹಿನ್ನೆಲೆಯಲ್ಲಿ, ಈ ಪ್ರಕರಣದಲ್ಲಿ ನಿರ್ಧಾರ ಕೈಗೊಳ್ಳುವ ಮುನ್ನ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಅಭಿಪ್ರಾಯ ಪಡೆಯಲಾಗಿದ್ದು, ಅದು ಈ ಕೆಳಗಿನಂತಿದೆ:–

"ಕರ್ನಾಟಕ ಸಿವಿಲ್ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977 ರ ನಿಯಮ 12 ರನ್ವಯ, ರಾಜ್ಯ ಸಿವಿಲ್ ಸೇವೆಗಳಲ್ಲಿನ ಹುದ್ದೆಗಳಿಗೆ ಆಯ್ಕೆಯಾದ ಅಭ್ಯರ್ಥಿಯು ಹುದ್ದೆಗೆ ನಿಗದಿಪಡಿಸಿರುವ ಕರ್ತವ್ಯಗಳನ್ನು ನಿರ್ವಹಿಸಲು ದೈಹಿಕವಾಗಿ ಸಮರ್ಥನೆಂದು ಸಕ್ಷಮ ನೇಮಕಾತಿ ಪ್ರಾಧಿಕಾರಕ್ಕೆ ಮನವರಿಕೆಯಾಗದ ಹೊರತು, ಆತನನ್ನು ಆಯ್ಕೆಯಾದ ಹುದ್ದೆಗೆ ನೇಮಕಾತಿ ಮಾಡುವಂತಿಲ್ಲ. ಸರ್ಕಾರ ಯಾವುದೇ ಒಂದು ಹುದ್ದೆಗೆ ಅಥವಾ ಸೇವೆಗೆ ಸಂಬಂಧಿಸಿದಂತೆ ಅಭ್ಯರ್ಥಿಗೆ ಅವಶ್ಯಕವಾಗಿ ಬೇಕಾಗಿರುವ ಸಮರ್ಥತೆಯ ಬಗ್ಗೆ ದೈಹಿಕ ಧಾರ್ಢ್ಯತೆಯನ್ನು ಹೊಂದಿರುವ ಬಗ್ಗೆ ಪ್ರಮಾಣ ಪತ್ರವನ್ನು ನೀಡಬಹುದಾದ ವೈದ್ಯಕೀಯ ಪ್ರಾಧಿಕಾರವನ್ನು ನಿಗದಿಪಡಿಸಲು ಆಸ್ಪದವಿರುತ್ತದೆ. ಈ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಪ್ರಯೋಗಿಸಿ ಸರ್ಕಾರ ದಿನಾಂಕ: 14/04/1978 ರ ಆದೇಶ ಸಂಖ್ಯೆ ಡಿಪಿಎಆರ್ 35 ಎಸ್‌ಆರ್‌ಆರ್ 77 ರಲ್ಲಿ ರಾಜ್ಯ ಸಿವಿಲ್ ಸೇವೆಗಳಲ್ಲಿನ ಹುದ್ದೆಗಳಿಗೆ ಆಯ್ಕೆಯಾದ ಅಭ್ಯರ್ಥಿಗಳಿಗೆ ದೈಹಿಕ ದಾರ್ಢ್ಯತೆಯನ್ನು ಹಾಗೂ ವೈದ್ಯಕೀಯ ಸಮರ್ಥತೆಯನ್ನು ನಿಗದಿಪಡಿಸಲಾಗಿದೆ. ವೈದ್ಯಕೀಯ ಪ್ರಮಾಣ ಪತ್ರವನ್ನು ನೀಡುವ ಬಗ್ಗೆ ಈ ಆದೇಶದಲ್ಲಿ ಕಾರ್ಯವಿಧಾನವನ್ನು ನಿಗದಿಪಡಿಸಲಾಗಿದೆ. ಮೇಲ್ಕಂಡ ಆದೇಶದ ಕಂಡಿಕೆ 9 (ಎ) ರಲ್ಲಿ ಈ ಕೆಳಕಂಡಂತೆ ತಿಳಿಸಲಾಗಿದೆ:–

"9. The following additional points should be observed:

(a) That the candidate's hearing in each ear is good and that there is no sign of disease of the ear. In case it is defective the candidate should be examined by the ear specialist. Provided, that if the defect in hearing is remediable by operation or by use of hearing aid, a candidate cannot be declared unfit on that account provided he/she has no progressive disease in the ear".

ಆದ್ದರಿಂದ, ಕರ್ನಾಟಕ ಆಡಳಿತ ನ್ಯಾಯಮಂಡಳಿಯು ಈ ಪ್ರಕರಣದಲ್ಲಿ ದಿನಾಂಕ: 28/08/2006 ರಂದು ನೀಡಿರುವ ಆದೇಶದಲ್ಲಿ ಮಾಡಿರುವ ಅವಲೋಕನೆಯನ್ನು ಮೇಲ್ಕಂಡ ಆಸ್ಪದದನ್ವಯ ಪರಿಶೀಲಿಸಿ ಸೂಕ್ತ ನಿರ್ಣಯ ತೆಗೆದುಕೊಳ್ಳಬಹುದು."

ಈ ಮೇರೆಗೆ ಅರಣ್ಯ ಇಲಾಖೆಯು, ಶ್ರೀ ಸಿ. ರವಿಶಂಕರ್ ಇವರನ್ನು ಮಂಗಳೂರಿನ ವೆನ್‌ಲಾಕ್ ಜಿಲ್ಲಾ ಸರಕಾರಿ ಆಸ್ಪತ್ರೆಗೆ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ನಿಗದಿಪಡಿಸಲಾದ ವೈದ್ಯಕೀಯ ಪರೀಕ್ಷೆಗೆ ಮಾತ್ರ ಒಳಪಡಿಸಿ ತಪಾಸಣೆ ಮಾಡಲು ತಿಳಿಸಿದೆ. ವೈದ್ಯಕೀಯ ವರದಿಯು ಈ ಕೆಳಕಂಡಂತಿದೆ:–

"This is to state that, a patient named Mr. Ravishankar aged 27 years, with a complaint of reduced hearing in left ear, was examined in our department on 20th December 2007 (As per the entry in Audiology Register-2) and the Audiological test results revealed.

Right ear: Hearing within Normal limits

Left ear: Moderate to severe mixed hearing loss.

Patient was referred from the Department of ENT to our Department on 20th December 2007".

Sd/- 22/8/08
ಜಿಲ್ಲಾ ಸರ್ಜನ್ ಮತ್ತು ಅಧೀಕ್ಷಕರು
ವೆನ್‌ಲಾಕ್ ಹಾಸ್ಪಿಟಲ್, ಮಂಗಳೂರು

Sd/- 22/8/08
ಡಾ: ಜಯಶ್ರೀ ಭಟ್ (ಪರವಾಗಿ)

ಆದರೆ ಡಾ: ಕಿಶೋರಚಂದ್ರ ಪ್ರಸಾದ್, Professor and HOD of Otorhinolaryngology ಈ ವೈದ್ಯಕೀಯ ವರದಿಯ ಬಗ್ಗೆ ಈ ಕೆಳಕಂಡಂತೆ ಅಭಿಪ್ರಾಯಪಟ್ಟು ಅದನ್ನು ವೆನ್ ಲಾಕ್ ಆಸ್ಪತ್ರೆಯ ಜಿಲ್ಲಾ ಸರ್ಜನ್ ಮತ್ತು ಅಧೀಕ್ಷಕರಿಗೆ ಕಳುಹಿಸಿರುತ್ತಾರೆ.

"As per your request I went through the Audiology report of Mr. Ravishankar, ACF, which indicates right ear is normal and left ear has moderate to severe hearing loss. This moderate to severe hearing loss could be sensory or conductive deafness, which can be possible for various reasons. However present Audiology reports indicate he is unfit to the job"

Sd/-
Dr: Kishore Chandra Prasad.

ಈ ಮೇಲಿನ ವೈದ್ಯಕೀಯ ವರದಿಯ ಬಗ್ಗೆ ಶ್ರೀ ಸಿ. ರವಿಶಂಕರ್ ಇವರು ದಿ: 01/07/2008 ರಂದು ಸರ್ಕಾರಕ್ಕೆ ಹಾಗೂ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ ಇವರಿಗೆ ಪತ್ರ ಬರೆದು ಮಂಗಳೂರಿನ ವೆನ್‌ಲಾಕ್ ಆಸ್ಪತ್ರೆಯಲ್ಲಿ ವೈದ್ಯಕೀಯ ಪರೀಕ್ಷೆಗೆ ಕಳುಹಿಸಿದಾಗ ಅನಾವಶ್ಯಕವಾದ ಪರೀಕ್ಷೆಗಳಿಗೆ ತನ್ನನ್ನು ಒಳಪಡಿಸಿ ಮಾನಸಿಕ ಮತ್ತು ದೈಹಿಕ ಒತ್ತಡ ಹೇರಿರುವುದಾಗಿ ತಿಳಿಸಿ, ಇನ್ನು ಹೆಚ್ಚಿನ ತಪಾಸಣೆಗೆ ಸದರಿ ಆಸ್ಪತ್ರೆಗೆ ತನ್ನನ್ನು ವೈದ್ಯಕೀಯ ಪರೀಕ್ಷೆಗಾಗಿ ಕಳುಹಿಸುವುದು ಬೇಡವೆಂದು ಹಾಗೂ ಈಗಾಗಲೇ ಆಯ್ಕೆ ಪೂರ್ವ ನಡೆಸಿದ ವೈದ್ಯಕೀಯ ವರದಿಯ ಆಧಾರದ ಮೇಲೆ ಪರೀಕ್ಷಾರ್ಥ ಅವಧಿಯನ್ನು ಘೋಷಿಸುವಂತೆ ಕೋರಿರುತ್ತಾರೆ.

ವೆನ್‌ಲಾಕ್ ಜಿಲ್ಲಾ ಆಸ್ಪತ್ರೆ, ಮಂಗಳೂರು ಇಲ್ಲಿ ಶ್ರೀ ಸಿ.ರವಿಶಂಕರ್ ಇವರನ್ನು Deparmental Audiology and Speech language pathology ವಿಭಾಗದಲ್ಲಿ ಪರೀಕ್ಷಿಸಿದ್ದು, ಡಾ: ಜಯಶ್ರೀ ಭಟ್ ಇವರ ಪರವಾಗಿ ಬೇರೊಬ್ಬರು ಸಹಿ ಮಾಡಿರುತ್ತಾರೆ. ಈ ವೈದ್ಯರು ಕಿವಿ, ಮೂಗು ಮತ್ತು ಗಂಟಲು ತಜ್ಞರೇ ಎಂಬುದು ತಿಳಿದುಬರುತ್ತಿಲ್ಲ. ಜಿಲ್ಲಾ ಶಸ್ತ್ರ ಚಿಕಿತ್ಸಕರು ಮತ್ತು ಅಧೀಕ್ಷಕರ ದಿ: 28/08/2008ರ ವರದಿಯಲ್ಲಿ ಆಸ್ಪತ್ರೆಯಲ್ಲಿರುವ ಕೆ.ಎಂ.ಸಿ. ವಿಭಾಗದ ದಾಖಲೆಗಳನ್ನು ಪರೀಕ್ಷಿಸಿ ಮಾಹಿತಿ ನೀಡಿರುತ್ತಾರೆ. ಆದರೆ, ತಜ್ಞ ವೈದ್ಯರು ಮೇಲ್ಕಂಡ ಅಂಶಗಳನ್ನು ದೃಢೀಕರಿಸಿರುವ ಬಗ್ಗೆ ಮಾಹಿತಿ ಒದಗಿಸಿರುವುದಿಲ್ಲ ಎನ್ನುವ ಅಂಶದ ಹಿನ್ನೆಲೆಯಲ್ಲಿ, ಸರ್ಕಾರದ ಆದೇಶ ಸಂಖ್ಯೆ ಡಿಪಿಆರ್ 35 ಎಸ್‌ಆರ್‌ಆರ್ 77, ದಿನಾಂಕ: 14/04/1978 ರಲ್ಲಿ ಸೂಚಿಸಿರುವಂತೆ, ನೇರ ನೇಮಕಾತಿ ಹುದ್ದೆಗಳಿಗೆ ಆಯ್ಕೆಯಾದ ಅಭ್ಯರ್ಥಿಗಳ ದೈಹಿಕ, ಧಾರ್ಢ್ಯತೆ ಮತ್ತು ವೈದ್ಯಕೀಯ ಸಮರ್ಥತೆಯನ್ನು ನಿರ್ಧಾರ ಮಾಡಲು ನಿಗದಿಪಡಿಸಿರುವ ಕಾರ್ಯ ವಿಧಾನದಂತೆ ಈ ಅಧಿಕಾರಿಯನ್ನು ಕಿವಿ, ಮೂಗು ಮತ್ತು ಗಂಟಲು ತಜ್ಞರಿಂದ ಪರೀಕ್ಷಿಸಿ, ಶ್ರವಣ ಶಕ್ತಿಯು ಸಹಜವಾಗಿಲ್ಲದಿದ್ದಲ್ಲಿ ಅದನ್ನು ಶಸ್ತ್ರಚಿಕಿತ್ಸೆ ಅಥವಾ ಕಿವಿ ಕೇಳಿಸುವ ಸಾಧನಗಳ ಮೂಲಕ ಸರಿಪಡಿಸಬಹುದೇ? (if the defect in hearing is remediable by operation or by use of hearing aid) ಎಂಬುದನ್ನು ಖಚಿತಪಡಿಸಿಕೊಳ್ಳಲು ವೈದ್ಯಕೀಯ ಮಂಡಳಿಯ ಅಭಿಪ್ರಾಯ ಪಡೆಯುವುದು ಸೂಕ್ತವೆಂದು ನಿರ್ಧರಿಸಿ ಶ್ರೀ ಸಿ. ರವಿಶಂಕರ್ ಇವರನ್ನು ಮತ್ತೆ ವೈದ್ಯಕೀಯ ಮಂಡಳಿಯ ಪರೀಕ್ಷೆಗೆ ಒಳಪಡಿಸಲಾಯಿತು.

ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಇಲಾಖೆ ಇವರು ಶ್ರೀ ಸಿ. ರವಿಶಂಕರ್ ಇವರನ್ನು Dr: S.R. Chandrashekhar, Institute of Speech and Hearing, Bangalore ಇಲ್ಲಿಗೆ ತಪಾಸಣೆಗಾಗಿ ಕಳುಹಿಸಿರುತ್ತಾರೆ. ಸದರಿ ವೈದ್ಯಕೀಯ ಸಂಸ್ಥೆಯು ನೀಡಿರುವ Audiological Case Report ಈ ಕೆಳಗಿನಂತಿದೆ.

**INTERPRETATION :**

Right: Normal hearing sensitivity

Left: Moderately – severe mixed hearing loss.

**RECOMMENDATION :**

- Hearing aid trial in left ear.

- Consider for BAHA (Bone anchored Hearing Aid)

- Follow up.

ಮುಂದುವರೆದು, ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಯವರು ಶ್ರೀ ಸಿ. ರವಿಶಂಕರ್ ಪರೀಕ್ಷಾರ್ಥ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ ಇವರು ಕರ್ತವ್ಯ ನಿರ್ವಹಿಸಿದ ಕ್ಷೇತ್ರೀಯ ಅಧಿಕಾರಿಗಳಿಂದ ವರದಿ ಪಡೆದಿದ್ದು, ಸದರಿ ಅಧಿಕಾರಿಯವರ ಎಡ ಕಿವಿಯ Moderate ಕಿವುಡುತನವು ಇವರ ಕರ್ತವ್ಯ ನಿರ್ವಹಣೆಯಲ್ಲಿ ಯಾವುದೇ ಪ್ರತಿಕೂಲ ಪರಿಣಾಮ ಬೀರದೆ ಅವರು ಸಮರ್ಪಕವಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾರೆ ಎಂದು ಮೇಲೆ ಓದಲಾದ ಕ್ರ.ಸಂ. 4 ರ ಪತ್ರದಲ್ಲಿ ವರದಿ ಮಾಡಿರುತ್ತಾರೆ.

ಈ ಮೇಲಿನ ಸಂದರ್ಭಗಳ ಹಿನ್ನಲೆಯಲ್ಲಿ, ಹಾಗೂ ಶ್ರೀ ಸಿ. ರವಿಶಂಕರ್, ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ (ಪರೀಕ್ಷಾರ್ಥ) ಇವರು ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ ಹುದ್ದೆಗೆ ನಿಗಧಿಪಡಿಸಿದ ಎಲ್ಲಾ ಇಲಾಖಾ ಪರೀಕ್ಷೆಗಳನ್ನು ಪಾಸು ಮಾಡಿರುವುದರಿಂದ, ಹಾಗೂ, ಇವರ 2007–08 ಮತ್ತು 2008–09 ನೇ ಪರೀಕ್ಷಾರ್ಥ ಅವಧಿಯ ಸಾಲಿನ ವಾರ್ಷಿಕ ಕಾರ್ಯ ನಿರ್ವಹಣಾ ವರದಿಗಳಲ್ಲಿ "very good" ಎಂಬ ಶ್ರೇಣಿ ನೀಡಿರುವುದರಿಂದ, ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ ರವರ ಈ ಮೇಲೆ ಓದಲಾದ ಕ್ರ.ಸಂ. (2) ರಲ್ಲಿನ ಪ್ರಸ್ತಾವನೆಯನ್ನು ಪರಿಗಣಿಸಿ, ಇವರ ಒಟ್ಟಾರೆ ಕಾರ್ಯನಿರ್ವಹಣೆಯು ತೃಪ್ತಿಕರವೆಂದು ಸರ್ಕಾರವು ಮನಗಂಡು ಶ್ರೀ ಸಿ. ರವಿಶಂಕರ್, ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ ಇವರ 2 ವರ್ಷಗಳ ಪರೀಕ್ಷಾರ್ಥ ಅವಧಿಯನ್ನು ತೃಪ್ತಿಕರವೆಂದು ಘೋಷಿಸಲು ನಿರ್ಧರಿಸಿ, ಈ ಕೆಳಕಂಡಂತೆ ನಿರ್ಧರಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಅಪಜೀ 138 ಅಪಸೇ 2009, ಬೆಂಗಳೂರು ದಿನಾಂಕ : 16/09/2010**

ಪ್ರಸ್ತಾವನೆಯಲ್ಲಿ ವಿವರಿಸಲಾದ ಸನ್ನಿವೇಶಗಳ ಹಿನ್ನೆಲೆಯಲ್ಲಿ, ಸರ್ಕಾರವು ಶ್ರೀ ಸಿ.ರವಿಶಂಕರ್, ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ ಇವರು ಡಿಪ್ಲೋಮ ಇನ್ ಪಾರೆಸ್ಟ್ರಿ ಕೋರ್ಸ್‌ನ್ನು ಯಶಸ್ವಿಯಾಗಿ ಪೂರೈಸಿ, ಅಧಿಸೂಚನೆ ಸಂಖ್ಯೆ ಅಪಜೀ 49 ಅತಶಿ 2004, ದಿನಾಂಕ: 15/05/2007 ರಲ್ಲಿ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ ಹುದ್ದೆಗೆ ನೇಮಕಗೊಂಡು ದಿನಾಂಕ: 17/05/2009 ರಂದು 2 ವರ್ಷಗಳ ಪರೀಕ್ಷಾರ್ಥ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಕರ್ನಾಟಕ ನಾಗರೀಕ ಸೇವಾ (ಪರೀಕ್ಷಾರ್ಥ) ನಿಯಮಗಳು 1977 ರ ನಿಯಮ 5 (1) (ಎ) ಪ್ರಕಾರ ಘೋಷಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ವಡಗಾವೆ ಬಸವರಾಜ್**
ಸರ್ಕಾರದ ಅಧೀನ ಕಾರ್ಯದರ್ಶಿ
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ
(ಸೇವೆಗಳು)

ಪಿ.ಆರ್. 2420

## ಸಹಕಾರ ಸಚಿವಾಲಯ

**ವಿಷಯ :** ಸ್ಮಾರ್ಟ್‌ಕಾರ್ಡ್ ಫೋರಂ ಆಫ್ ಇಂಡಿಯಾ ಇಂದಿರಾನಗರ, ಬೆಂಗಳೂರು ಈ ಸಂಘಕ್ಕೆ ಆಡಳಿತಾಧಿಕಾರಿಯನ್ನು ನೇಮಕ ಮಾಡುವ ಬಗ್ಗೆ.

**ಓದಲಾಗಿದೆ :**
1) ಸರ್ಕಾರದ ಆದೇಶ ಸಂಖ್ಯೆ: ಸಇ 165 ಸಸಂನೋ 2009 ದಿನಾಂಕ: 23/04/2010.
2) ಕರ್ನಾಟಕ ಉಚ್ಚ ನ್ಯಾಯಾಲಯದ ರಿಟ್ ಅರ್ಜಿಯ ಬಗ್ಗೆ ದಿನಾಂಕ: 31/05/2010 ರಂದು ನೀಡಲಾದ ತೀರ್ಪು.
3) ಕಾರಣ ಕೇಳುವ ನೋಟೀಸಿನ ಸಂಖ್ಯೆ: ಸಇ 70 ನ್ಯಾಧಾಅ 2010 ದಿನಾಂಕ: 22/07/2010.
4) ಕಾರ್ಯದರ್ಶಿ, ಸ್ಮಾರ್ಟ್ ಕಾರ್ಡ್ ಫೋರಂ ಆಫ್ ಇಂಡಿಯಾ ಇಂದಿರಾನಗರ, ಬೆಂಗಳೂರು ಇವರ ಹೇಳಿಕೆಯ ದಿನಾಂಕ: 28/08/2010.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ: (1) ರ ದಿನಾಂಕ: 23/04/2010 ರ ಸರ್ಕಾರಿ ಆದೇಶದಲ್ಲಿ ಸ್ಮಾರ್ಟ್ ಕಾರ್ಡ್ ಫೋರಂ ಆಫ್ ಇಂಡಿಯಾ, ಇಂದಿರಾನಗರ, ಬೆಂಗಳೂರು ಈ ಸಂಸ್ಥೆಯಲ್ಲಿ ನಡೆದಿದೆ ಎನ್ನಲಾದ ಲೋಪದೋಷಗಳ ಬಗ್ಗೆ ಸಂಘದ ಸದಸ್ಯರ ಹಿತದೃಷ್ಠಿಯಿಂದ ಸಹಕಾರ ಸಂಘಗಳ ನಿಬಂಧಕರ ದಿನಾಂಕ: 27/03/2010 ರ ಪತ್ರ ಸಂಖ್ಯೆ: ಆರ್‌ಸಿಎಸ್/ಎಸ್‌ಓಆರ್/213/2009-10 ರಲ್ಲಿ ಶಿಫಾರಸ್ಸು ಮಾಡಿರುವಂತೆ **ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ಕಲಂ 27(ಎ) ರನ್ವಯ** ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಡಿ.ಸಿ.ನಾಗರಾಜಯ್ಯ, ಸಹಕಾರ ಸಂಘಗಳ ಜಂಟಿ ನಿಬಂಧಕರು ಹಾಗೂ ಪ್ರಧಾನ ವ್ಯವಸ್ಥಾಪಕರು (ಆಡಳಿತ), ಸಹಕಾರಿ ಹಾಲು ಒಕ್ಕೂಟ, ಬೆಂಗಳೂರು ಇವರನ್ನು ಆಡಳಿತಾಧಿಕಾರಿಯನ್ನಾಗಿ ಆರು ತಿಂಗಳ ಅವಧಿಗೆ ನೇಮಿಸಿ ಆದೇಶಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (2) ರಲ್ಲಿ ಕರ್ನಾಟಕ ನ್ಯಾಯಾಲಯದಲ್ಲಿ ಸ್ಮಾರ್ಟ್ ಕಾರ್ಡ್ ಫೋರಂ ಆಫ್ ಇಂಡಿಯಾ, ಇಂದಿರಾನಗರ, ಬೆಂಗಳೂರು ಇವರು ದಿನಾಂಕ: 23/04/2010 ರ ಸರ್ಕಾರಿ ಆದೇಶವನ್ನು ಪ್ರಶ್ನಿಸಿ ರಿಟ್ ಪಿಟಿಷನ್ ಸಂಖ್ಯೆ: 15836 / 2010 ನ್ನು ದಾಖಲಿಸಿರುತ್ತಾರೆ. ಸದರಿ ರಿಟ್ ಅರ್ಜಿಯನ್ನು ನ್ಯಾಯಾಲಯವು ಪರಿಶೀಲಿಸಿ ದಿನಾಂಕ: 31/05/2010 ರ ತೀರ್ಪಿನಲ್ಲಿ ದಿನಾಂಕ: 23/04/2010 ರ ಸರ್ಕಾರಿ ಆದೇಶವನ್ನು ರದ್ದುಪಡಿಸಿ, ಸದರಿ ಪ್ರಕರಣವನ್ನು ರಾಜ್ಯ ಸರ್ಕಾರವು ನಿಯಮಾನುಸಾರ ಪುನರ್ ಪರಿಶೀಲಿಸುವಂತೆ ಸೂಚಿಸಿದೆ. ಅದೂ ಅಲ್ಲದೆ ಸರ್ಕಾರಿ ಆದೇಶದಲ್ಲಿ ಯಾವುದೇ ಸ್ಪಷ್ಟ ಸಕಾರಣಗಳು ತಿಳಿಸದೆ ಮೇಲ್ಕಂಡ ಸಂಘಕ್ಕೆ ಆಡಳಿತಾಧಿಕಾರಿಯನ್ನು ನೇಮಿಸಿದ್ದು, ಆ ಆದೇಶವನ್ನು ಸಹ ಪುನರ್ ಪರಿಶೀಲಿಸುವಂತೆ ಆದೇಶಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (3) ರ ದಿನಾಂಕ: 22/07/2010 ರ ಕಾರಣ ಕೇಳುವ ನೋಟೀಸಿನಲ್ಲಿ ದಿನಾಂಕ: 31/05/2010 ರ ನ್ಯಾಯಾಲಯದ ತೀರ್ಪಿನನ್ವಯ ಸ್ಮಾರ್ಟ್ ಕಾರ್ಡ್ ಫೋರಂ ಆಫ್ ಇಂಡಿಯಾ, ಇಂದಿರಾನಗರ, ಬೆಂಗಳೂರು ಈ ಸಂಘದ ಅಧ್ಯಕ್ಷರು / ಕಾರ್ಯದರ್ಶಿಯವರಿಗೆ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಿ ಪ್ರಕರಣವನ್ನು ಮರು ಪರಿಶೀಲಿಸಲು ಉದ್ದೇಶಿಸಿದ್ದು, ಸಂಸ್ಥೆಯ ಮೇಲೆ ಮಾಡಲಾಗಿರುವ ಆರೋಪ ತಮ್ಮ ಉತ್ತರ ಹಾಗೂ ಆರೋಪಗಳ ಬಗ್ಗೆ ಸರ್ಕಾರದ ಷರಾವನ್ನೊಳಗೊಂಡ ಒಂದು ಪಟ್ಟಿ ಮತ್ತು ಆಡಳಿತಾಧಿಕಾರಿಗಳು ನೀಡಿರುವ ವರದಿಯನ್ನು ಲಗತ್ತಿಸಿ ಈ ಬಗ್ಗೆ ನಿಮ್ಮ ಹೇಳಿಕೆಗಳು ಏನಾದರೂ ಇದ್ದರೆ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಹಕಾರ ಇಲಾಖೆ ಇವರ ಮುಂದೆ ದಿನಾಂಕ: 28/08/2010 ರಂದು ಬೆಳಿಗ್ಗೆ 11-00 ಗಂಟೆಗೆ ವೈಯಕ್ತಿಕವಾಗಿ ಹಾಜರಾಗಿ ಅಥವಾ ಲಿಖಿತವಾಗಿ ನೀಡಬಹುದೆಂದು ತಿಳಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ: (4) ರ ದಿನಾಂಕ: 28/08/2010 ರ ಪತ್ರದಲ್ಲಿ ಕಾರ್ಯದರ್ಶಿ, ಸ್ಮಾರ್ಟ್ ಕಾರ್ಡ್ ಫೋರಂ ಆಫ್ ಇಂಡಿಯಾ, ಇಂದಿರಾನಗರ, ಬೆಂಗಳೂರು ರವರು ಸಂಘದ ವಿರುದ್ಧ ಮಾಡಲಾದ ಎಲ್ಲಾ ಆರೋಪಗಳನ್ನು ತಿರಸ್ಕರಿಸಿರುತ್ತಾರೆ. ಮುಂದುವರೆದು, ಸಂಘದ ಸರ್ವ ಸದಸ್ಯರ ವಾರ್ಷಿಕ ಮಹಾ ಸಭೆಯನ್ನು ದಿನಾಂಕ: 17/01/2009 ಹಾಗೂ ದಿನಾಂಕ: 31/07/2010 ರಂದು ಬೆಂಗಳೂರಿನಲ್ಲಿ ನಿಯಮಾನುಸಾರ ಹಾಗೂ ಸಂಘದ ಬೈಲಾ ಪ್ರಕಾರ ನಡೆಸಲಾಗಿದೆ. ಸದರಿ ಸಭೆಯಲ್ಲಿ ಸಂಘದ ವಿರುದ್ಧದ ಎಲ್ಲಾ ಆರೋಪಗಳನ್ನು ಅಂದರೆ ಶುಲ್ಕ ಸದಸ್ಯತ್ವ ಮತ್ತು ಲೆಕ್ಕಪತ್ರಗಳ ಬಗ್ಗೆ ಚರ್ಚಿಸಿ ಠರಾವನ್ನು ನಮೂದಿಸಲಾಗಿದೆ. ಇದರಿಂದ, ಕೆಲವೊಂದು ಸದಸ್ಯರು ಸಂಘದ ವಿರುದ್ಧ ಇಲ್ಲ-ಸಲ್ಲದ ಆರೋಪಗಳನ್ನು ಮಾಡಿರುತ್ತಾರೆ. ಈ ಹಿನ್ನೆಲೆಯಲ್ಲಿ ಸಂಘದ ವಿರುದ್ಧ ಹೂಡಲಾದ ಎಲ್ಲಾ ಆರೋಪಗಳನ್ನು ಬದಿಗೊತ್ತಿ ಸಂಘದ ದಾಖಲಾತಿಗಳನ್ವಯ ಸದಸ್ಯರ ಹಿತದೃಷ್ಠಿಯಿಂದ ಹಾಗೂ ಸಂಘದ ಹಿತದೃಷ್ಠಿಯಿಂದ ಸಂಘಕ್ಕೆ ಆಡಳಿತಾಧಿಕಾರಿಯನ್ನು ನೇಮಿಸುವ ಪ್ರಸ್ತಾವನೆಯನ್ನು ಸರ್ಕಾರವು ಕೈಬಿಡುವಂತೆ ವಿನಂತಿಸಿರುತ್ತಾರೆ.

ಮೇಲೆ ಟಿಪ್ಪಣಿಸಿರುವ ಹಿನ್ನೆಲೆಯಲ್ಲಿ ಹಾಗೂ ಸಂಘದ ವಿರುದ್ಧ ಆರೋಪಗಳು ಸದರಿ ಆರೋಪಗಳಿಗೆ ಸಂಘದವರು ನೀಡಿರುವ ಲಿಖಿತ ಹೇಳಿಕೆ ಮತ್ತು ದಾಖಲಾತಿಗಳನ್ನು ಹಾಗೂ ನ್ಯಾಯಾಲಯದ ತೀರ್ಪಿನ್ನು ಸಹ ಪರಿಗಣಿಸಲಾಗಿದೆ. ಪರಿಶೀಲಿಸಿದ ನಂತರ ಸಂಘವು ದಿನಾಂಕ: 23/12/2008 ರಂದು ಸಂಘವು ಸಾಮಾನ್ಯ ಸಭೆ ನಡೆಸಿದ್ದು, ದಿನಾಂಕ: 17/01/2009 ರಂದು ಚುನಾವಣೆಯನ್ನು ನಡೆಸಲಾಗಿದೆ ಹಾಗೂ ಇನ್ನು ಮುಂದೆ ಮೂರು ವರ್ಷಕ್ಕೊಮ್ಮೆ ಚುನಾವಣೆ ನಡೆಸಲು ಬೈಲಾವನ್ನು ತಿದ್ದುಪಡಿ ಮಾಡಲಾಗಿದೆ. ಸದರಿ ಬೈಲಾಗಳನ್ನು ತಿದ್ದುಪಡಿ ಮಾಡಲು ಸಂಘವು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುವುದಿಲ್ಲ. ಚುನಾವಣೆಯನ್ನು ನಡೆಸುವ ಮುನ್ನಾ ಅರ್ಹರಲ್ಲದ ಸದಸ್ಯರ ಪಟ್ಟಿಯನ್ನು ಪ್ರಕಟಿಸುವುದು ಕಂಡುಬರುತ್ತಿದೆ. ಸದರಿ ಸಂಘದಲ್ಲಿ 125 ಸದಸ್ಯರಿದ್ದು, ಸದ್ಯ 54 ಸದಸ್ಯರುಗಳು ಮಾತ್ರ ಇರುತ್ತಾರೆ. ಸದರಿ ಸಂಘವು ಬೆಂಗಳೂರಿನಿಂದಲೇ ನೋಂದಣಿಯಾಗಿದ್ದು, ಒಂದು ಕೈಗಾರಿಕಾ ಸಂಸ್ಥೆಯಾಗಿ ಕಾರ್ಯ ನಿರ್ವಹಿಸುತ್ತಿದೆ. ಸದರಿ ಸಂಘವು ಸಿಟಿ ಬ್ಯಾಂಕ್, ಬೆಂಗಳೂರಿನಲ್ಲಿ ಚಾಲ್ತಿ ಖಾತೆಯನ್ನು ಹೊಂದಿರುತ್ತದೆ. ಆದ್ದರಿಂದ, ಸಂಘವು ದಿನಾಂಕ: 31/07/2010 ರಂದು ವಾರ್ಷಿಕ ಮಹಾ ಸಭೆಯನ್ನು ಹಾಗೂ ಚುನಾವಣೆಯನ್ನು ನಡೆಸಿ, 7 ಜನರ ಕಾರ್ಯಕಾರಿ ಮಂಡಳಿಯನ್ನು ಆಯ್ಕೆ ಮಾಡಿ ಸಂಘವು ಅಸ್ತಿತ್ವದಲ್ಲಿರುತ್ತದೆ. ಈ ಎಲ್ಲಾ ಅಂಶಗಳನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಇ 165 ಸಸಂನೋ 2009, ಬೆಂಗಳೂರು, ದಿನಾಂಕ : 14ನೇ ಸೆಪ್ಟಂಬರ್, 2010.**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸ್ಮಾರ್ಟ್ ಕಾರ್ಡ್ ಫೋರಂ ಆಫ್ ಇಂಡಿಯಾ, ನಂ.650, 17ನೇ ಸಿ ಕ್ರಾಸ್, 10ನೇ ಮುಖ್ಯ ರಸ್ತೆ, ಸಿ.ಎಂ.ಹೆಚ್ ರಸ್ತೆ, ಇಂದಿರಾನಗರ, ಬೆಂಗಳೂರು ಈ ಸಂಘವು ಯಾವುದೇ ಲೋಪದೋಷಗಳು ಇಲ್ಲದೆ ಸಂಘವು ಸುಗಮವಾಗಿ ನಡೆಯುತ್ತಿದ್ದು ದಿನಾಂಕ: 17/01/2009 ರಂದು ಚುನಾವಣೆಯನ್ನು ನಡೆಸಿ, ನೂತನ ಆಡಳಿತ ಮಂಡಳಿ ಅಸ್ತಿತ್ವಕ್ಕೆ ಬಂದಿರುವುದರಿಂದ ಹಾಗೂ ದಿನಾಂಕ: 31/07/2010 ರಂದು ವಾರ್ಷಿಕ ಸರ್ವ ಸದಸ್ಯರ ಸಭೆ ನಡೆದಿದ್ದು, ಸದರಿ ಸಭೆಯಲ್ಲಿ 54 ಸದಸ್ಯರ ಪೈಕಿ 35 ಸದಸ್ಯರು ಹಾಜರಾಗಿ 7 ಜನರನ್ನು ಒಳಗೊಂಡ ಕಾರ್ಯಕಾರಿ ಸಮಿತಿಯನ್ನು ಆಯ್ಕೆ ಮಾಡಿರುವುದರಿಂದ, ಮೇಲ್ಕಂಡ ಸಂಘಕ್ಕೆ ಆಡಳಿತಾಧಿಕಾರಿಯನ್ನು ನೇಮಿಸುವ ಅವಶ್ಯಕತೆ ಇಲ್ಲವೆಂದು ಸರ್ಕಾರವು ತೀರ್ಮಾನಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ನಂಜುಂಡಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ-2,
ಸಹಕಾರ ಇಲಾಖೆ.

ಪಿ.ಆರ್. 2421

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ** : 2010-11ನೇ ಸಾಲಿಗೆ ಕೆಬಿಟ್ಸ್ ಸಂಸ್ಥೆಯ ಆಡಳಿತ ನಿರ್ವಹಣೆಗಾಗಿ ಎರಡನೇ ಕಂತಿನ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ** :
(1) ಸರ್ಕಾರಿ ಆದೇಶ ಸಂಖ್ಯೆ: ಮಾತಂಇ 35 ಆಡವಿ 2010 ದಿ. 15-04-10.
(2) ಸರ್ಕಾರಿ ಆದೇಶ ಸಂಖ್ಯೆ ಮಾತಂಇ 54 ಅಡವಿ 2010 (1), ಬೆಂಗಳೂರು, ದಿನಾಂಕ: 07-05-2010.
(3) ಅಪರ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಜೈವಿಕ ತಂತ್ರಜ್ಞಾನ ಮತ್ತು ಮಾಹಿತಿ ತಂತ್ರಜ್ಞಾನ ಸೇವೆಗಳು ಇವರ ಪತ್ರ ಸಂಖ್ಯೆ: ಕೆಬಿಟ್ಸ್/ಎಸಿಟಿ/100/2010-11 ದಿನಾಂಕ: 06-09-2010.

**ಪ್ರಸ್ತಾವನೆ:**

2010-11ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕಶೀರ್ಷಿಕೆ "3451-00-090-2-01 ಮಾಹಿತಿ ತಂತ್ರಜ್ಞಾನ-ಉನ್ನತೀಕರಣ ಮತ್ತು ಅಭಿವೃದ್ಧಿ 059 ಇತರೆ ಖರ್ಚು (ಯೋಜನೆ)' ರಡಿಯಲ್ಲಿ ರೂ.1000.00 ಲಕ್ಷಗಳ ಅನುದಾನವನ್ನು ಒದಗಣೆ ಮಾಡಲಾಗಿದೆ. ಅದರಲ್ಲಿ ಕೆಬಿಟ್ಸ್ ಸಂಸ್ಥೆಯ ಆಡಳಿತಾತ್ಮಕ ವೆಚ್ಚಕ್ಕಾಗಿ ರೂ. 120.00 ಲಕ್ಷಗಳನ್ನು ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಹಂಚಿಕೆ ಮಾಡಲಾಗಿದೆ.

ಮೇಲೆ (2)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಕೆಬಿಟ್ಸ್ ಸಂಸ್ಥೆಯ ಆಡಳಿತ ನಿರ್ವಹಣೆಗಾಗಿ ಮೊದಲನೆಯ ಕಂತಾಗಿ ರೂ.30.00 ಲಕ್ಷಗಳ ಅನುದಾನವನ್ನು ಬಿಡುಗಡೆ ಮಾಡಲಾಗಿದೆ.

ಅಪರ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಜೈವಿಕ ತಂತ್ರಜ್ಞಾನ ಮತ್ತು ಮಾಹಿತಿ ತಂತ್ರಜ್ಞಾನ ಸೇವೆಗಳು ಇವರು ಮೇಲೆ ಓದಲಾದ (3)ರಲ್ಲಿನ ಪತ್ರದಲ್ಲಿ ಕರ್ನಾಟಕ ಜೈವಿಕ ತಂತ್ರಜ್ಞಾನ ಮತ್ತು ಮಾಹಿತಿ ತಂತ್ರಜ್ಞಾನ ಸೇವೆಗಳು (ಕೆಬಿಟ್ಸ್) ಸಂಸ್ಥೆಯ ಆಡಳಿತಾತ್ಮಕ ವೆಚ್ಚಕ್ಕಾಗಿ ರೂ.60.00 ಲಕ್ಷಗಳನ್ನು ಬಿಡುಗಡೆ ಮಾಡಲು ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ರೂ. 30.00 ಲಕ್ಷಗಳ ಅನುದಾನವನ್ನು ಬಿಡುಗಡೆ ಮಾಡಲು ನಿರ್ಧರಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಮಾತಂಇ 54 ಅಡವಿ 2010, ಬೆಂಗಳೂರು, ದಿನಾಂಕ : 17-09-2010.**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ, ಕೆಬಿಟ್ಸ್ ಸಂಸ್ಥೆಯ ಆಡಳಿತಾತ್ಮಕ ವೆಚ್ಚಕ್ಕಾಗಿ ಎರಡನೆಯ ಕಂತಾಗಿ ರೂ. 30.00 ಲಕ್ಷಗಳ (ರೂ. ಮುವತ್ತು ಲಕ್ಷಗಳು ಮಾತ್ರ) ಅನುದಾನವನ್ನು 2010-11ನೇ ಸಾಲಿನಲ್ಲಿ ಕರ್ನಾಟಕ ಜೈವಿಕ ತಂತ್ರಜ್ಞಾನ ಮತ್ತು ಮಾಹಿತಿ ತಂತ್ರಜ್ಞಾನ ಸೇವೆಗಳು (ಕೆಬಿಟ್ಸ್) ಸಂಸ್ಥೆಗೆ ಪಾವತಿಸಲು ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ ಇವರಿಗೆ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿ ನೀಡಿದೆ.

ಸದರಿ ಅನುದಾನವನ್ನು ಆಡಳಿತಾಧಿಕಾರಿಗಳು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರು ನಿರ್ದೇಶಕರು ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರ ಮೇಲು ಸಹಿ ಪಡೆದು ಖಜಾನೆಯಿಂದ ಸದರಿ ಅನುದಾನವನ್ನು ಡ್ರಾ ಮಾಡಿ ವಿತರಿಸತಕ್ಕದ್ದು.

ಈ ವೆಚ್ಚವನ್ನು 2010–11ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ '3451–00–090–2–01 ಮಾಹಿತಿ ತಂತ್ರಜ್ಞಾನದ ಉನ್ನತೀಕರಣ ಮತ್ತು ಅಭಿವೃದ್ಧಿ–059–ಇತರೆ ವೆಚ್ಚ (ಯೋಜನೆ)' ಇದರ ಅಡಿಯಲ್ಲಿ ಪ್ರಸಕ್ತ ಸಾಲಿನಲ್ಲಿ ಒದಗಿಸಿರುವ ಅನುದಾನದಿಂದ ಭರಿಸತಕ್ಕದ್ದು,

ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ, ಇವರು ಅನುದಾನದ ಬಳಕೆಯ ಬಗ್ಗೆ ಕರ್ನಾಟಕ ಜೈವಿಕ ತಂತ್ರಜ್ಞಾನ ಮತ್ತು ಮಾಹಿತಿ ತಂತ್ರಜ್ಞಾನ ಸೇವೆಗಳು (ಕೆಬಿಟ್ಸ್) ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರಿಂದ ಉಪಯೋಗಿತಾ ದೃಢೀಕರಣ ಪತ್ರವನ್ನು ವೆಚ್ಚ ಮಾಡಿದ ಅನುದಾನದ ವಿವರಗಳ ಜೊತೆಗೆ ಪಡೆದು ಈ ಆರ್ಥಿಕ ವರ್ಷದೊಳಗಾಗಿ ಸರ್ಕಾರಕ್ಕೆ ಒದಗಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶಗಳ ಸಂಖ್ಯೆ: ಎಫ್‌ಡಿ 01 ಟಿಎಫ್‌ಪಿ 2008 ದಿನಾಂಕ: 16–05–2008 ರನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ವಿ.ಕೃಷ್ಣಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ

ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ.

ಪಿ.ಆರ್. 2422

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ :** ಗ್ರಾಮೀಣ ಬಿಪಿಓ ಕೇಂದ್ರಗಳನ್ನು ಸ್ಥಾಪಿಸುವ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸುವ ಬಗ್ಗೆ

**ಓದಲಾಗಿದೆ :**
1) ಸರ್ಕಾರಿ ಆದೇಶ ಸಂಖ್ಯೆ ಮಾತಂಇ 39 ಅಚವಿ 2008, ದಿನಾಂಕ: 19–1–2009,
2) ಸರ್ಕಾರಿ ಆದೇಶ ಸಂಖ್ಯೆ ಮಾತಂಇ 39 ಅಚವಿ 2008, ದಿನಾಂಕ: 30–03–2009,
3) ಸರ್ಕಾರಿ ಆದೇಶ ಸಂಖ್ಯೆ ಮಾತಂಇ 39 ಅಚವಿ 2008, ದಿನಾಂಕ: 20–10–2009,
4) ಸರ್ಕಾರಿ ಆದೇಶ ಸಂಖ್ಯೆ ಮಾತಂಇ 39 ಅಚವಿ 2008, ದಿನಾಂಕ: 29–10–2009,
5) ಸರ್ಕಾರಿ ಆದೇಶ ಸಂಖ್ಯೆ ಮಾತಂಇ 39 ಅಚವಿ 2008, ದಿನಾಂಕ: 11–02–2010,
6) ಸರ್ಕಾರಿ ಆದೇಶ ಸಂಖ್ಯೆ ಐಟಿಡಿ 68 ಎಡಿಎಂ 2010, ದಿನಾಂಕ:03–07–2010.
7) ಅಪರ ವ್ಯವಸ್ಥಾಪಕ ನಿರ್ದೇಶಕರು ಕೆಬಿಟ್ಸ್, ಇವರ ಪತ್ರದ ಸಂಖ್ಯೆ: ಕೆಬಿಟ್ಸ್/ಕೈ.ಉ.ಅ/ ಗ್ರಾಬಿಪಿಓ/22/2010–11, ದಿ. 6–9–2010.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಸರ್ಕಾರವು 1 ಲಕ್ಷಕ್ಕಿಂತ ಕಡಿಮೆ ಜನಸಂಖ್ಯೆಯುಳ್ಳ ತಾಲ್ಲೂಕು / ಹೋಬಳಿ ಕೇಂದ್ರ ಸ್ಥಳಗಳಲ್ಲಿ ಗ್ರಾಮಾಂತರ ಬಿ.ಪಿ.ಓ. ಕೇಂದ್ರಗಳನ್ನು ಸ್ಥಾಪಿಸುವ ಹೊಸ ಯೋಜನೆಯನ್ನು ಅನುಷ್ಠಾನಗೊಳಿಸಲು ಹಾಗೂ 100 ವ್ಯಕ್ತಿಗಳಿಗೆ ಕಡಿಮೆ ಇಲ್ಲದಂತೆ ನೇರ ಉದ್ಯೋಗವನ್ನು ನೀಡುವ ಗ್ರಾಮೀಣ ಬಿ.ಪಿ.ಓ ಕೇಂದ್ರವು ರಾಜ್ಯ ಸರ್ಕಾರದಿಂದ ಆರ್ಥಿಕ ಬೆಂಬಲಕ್ಕೆ ಅರ್ಹವಾಗಿರುವ ಬಗ್ಗೆ ಆದೇಶ ಹೊರಡಿಸಲಾಗಿದೆ.

ಮೇಲೆ (2)ರಿಂದ 5ರಲ್ಲಿ ಓದಲಾದ ಆದೇಶಗಳಲ್ಲಿ 2008–09ನೇ ಸಾಲಿನಿಂದ ಇಲ್ಲಿಯವರೆಗೆ ರೂ. 420.00 ಲಕ್ಷಗಳನ್ನು ಗ್ರಾಮೀಣ ಬಿಪಿಓ ಕೇಂದ್ರಗಳನ್ನು ಸ್ಥಾಪಿಸಲು ಈಗಾಗಲೇ ಬಿಡುಗಡೆಮಾಡಿದೆ.

ಮೇಲೆ (6)ರಲ್ಲಿ ಓದಲಾದ ದಿನಾಂಕ: 03–07–2010ರ ಆದೇಶದಲ್ಲಿ ಸದರಿ ಯೋಜನೆಯನ್ನು 2010–11ನೇ ಸಾಲಿಗೆ ಮುಂದುವರೆಸಲಾಗಿದ್ದು ಲೆಕ್ಕಶೀರ್ಷಿಕೆ **"3451–00–090–2–23 ಗ್ರಾಮೀಣ ಬಿಪಿಓಗಳು–059 ಇತರೆ ಖರ್ಚುಗಳು"** ಇದರಡಿಯಲ್ಲಿ ಒದಗಿಸಲಾಗಿರುವ ರೂ. 800 ಲಕ್ಷಗಳನ್ನು ವಿನಿಯೋಗಿಸುವ ಬಗ್ಗೆ ಅನುಮೋದಿಸಲಾಗಿದೆ.

ಮೇಲೆ (7)ರಲ್ಲಿ ಓದಲಾದ ಕೆಬಿಟ್ಸ್ ಸಂಸ್ಥೆಯ ಅಪರ ವ್ಯವಸ್ಥಾಪಕ ನಿರ್ದೇಶಕರ ದಿನಾಂಕ: 06–09–2010ರ ಪತ್ರದಲ್ಲಿ ಒಟ್ಟು 20 ಗ್ರಾಮೀಣ ಬಿಪಿಓ ಕೇಂದ್ರಗಳನ್ನು ಸ್ಥಾಪನೆ ಮಾಡಲು ಇಲ್ಲಿಯವರೆಗೆ ಸರ್ಕಾರದಿಂದ ಮಂಜೂರಾತಿಯನ್ನು ಪಡೆಯಲಾಗಿದ್ದು ಅದರಲ್ಲಿ ಈಗಾಗಲೇ 16 ಕೇಂದ್ರಗಳನ್ನು ಸ್ಥಾಪನೆಮಾಡಿರುವ ಬಗ್ಗೆ ಉಲ್ಲೇಖಿಸುತ್ತಾ, ಉಳಿದ 4 ಕೇಂದ್ರಗಳನ್ನು ಸೆಪ್ಟೆಂಬರ್ 2010ರ ಮಾಹೆ ಸ್ಥಾಪನೆಮಾಡಿ ಕಾರ್ಯಾರಂಭಗೊಳಿಸಲು ಬಿಪಿಓ ಕೇಂದ್ರಗಳಿಗೆ ಆರ್ಥಿಕ ಬೆಂಬಲವನ್ನು ಬಿಡುಗಡೆ ಮಾಡುವ ಸಲುವಾಗಿ ರೂ. 300.00 ಲಕ್ಷಗಳ ಅನುದಾನ ಬಿಡುಗಡೆ ಮಾಡಲು ಕೋರಿದೆ.

ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ 2010–11ನೇ ಸಾಲಿನಲ್ಲಿ ಗ್ರಾಮೀಣ ಬಿಪಿಓಗಳ ಯೋಜನೆ ಅನುಷ್ಠಾನಕ್ಕಾಗಿ ಒದಗಿಸಲಾದ ರೂ. 800 ಲಕ್ಷಗಳಲ್ಲಿ ರೂ. 100 ಲಕ್ಷಗಳನ್ನು ಕೆಬಿಟ್ಸ್ ಸಂಸ್ಥೆಗೆ ಬಿಡುಗಡೆ ಮಾಡಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಐಟಿಡಿ 39 ಎಂಡಿಎ 2008, ಬೆಂಗಳೂರು ದಿನಾಂಕ : 17–09–2010**

ಪ್ರಸ್ತಾವನೆಯಲ್ಲಿ ಹೇಳಿರುವ ಸಂದರ್ಭದಲ್ಲಿ ಸ್ಕ್ರೀನಿಂಗ್ ಕಮಿಟಿಯ ಶಿಫಾರಸ್ಸಿನಂತೆ ಸರ್ಕಾರದಿಂದ ಅನುಮೋದಿಸಲ್ಪಟ್ಟ ಗ್ರಾಮೀಣ ಬಿಪಿಓ ಕೇಂದ್ರಗಳನ್ನು ಸ್ಥಾಪಿಸುವ ಸಲುವಾಗಿ ಆರ್ಥಿಕ ಬೆಂಬಲ ನೀಡಲು, 2010–11ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕಶೀರ್ಷಿಕೆ **"3451–00–090–2–23 ಗ್ರಾಮೀಣ ಬಿಪಿಓಗಳು–059 ಇತರೆ ಖರ್ಚುಗಳು"** ಇದರಡಿಯಲ್ಲಿ ಒದಗಿಸಲಾಗಿರುವ ರೂ. 800 ಲಕ್ಷಗಳ ಅನುದಾನದಲ್ಲಿ ರೂ. 100 ಲಕ್ಷಗಳನ್ನು (ರೂ. ನೂರು ಲಕ್ಷಗಳ ಮಾತ್ರ) ಕೆಬಿಟ್ಸ್ ಸಂಸ್ಥೆಗೆ ಬಿಡುಗಡೆ ಮಾಡಲು ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ ಇವರಿಗೆ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿ ನೀಡಿದೆ.

ಸದರಿ ಅನುದಾನವನ್ನು ಆಡಳಿತಾಧಿಕಾರಿಗಳು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರು ನಿರ್ದೇಶಕರು ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರ ಮೇಲು ಸಹಿ ಪಡೆದು ಖಜಾನೆಯಿಂದ ಸದರಿ ಅನುದಾನವನ್ನು ಡ್ರಾ ಮಾಡಿ ಪ್ರಧಾನ ವ್ಯವಸ್ಥಾಪಕರು, ಕೆಬಿಟ್ಸ್ ಇವರಿಗೆ ವಿತರಿಸತಕ್ಕದ್ದು.

ಈ ವೆಚ್ಚವನ್ನು 2010–11ನೇ ಸಾಲಿನಲ್ಲಿ ಲೆಕ್ಕಶೀರ್ಷಿಕೆ **"3451–00–090–2–23 ಗ್ರಾಮೀಣ ಬಿಪಿಓಗಳು–059 ಇತರೆ ಖರ್ಚುಗಳು"** ಅಡಿಯಲ್ಲಿ ಪ್ರಸಕ್ತ ಸಾಲಿನಲ್ಲಿ ಒದಗಿಸಿರುವ ಅನುದಾನದಿಂದ ಭರಿಸತಕ್ಕದ್ದು,

ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ, ಇವರು ಅನುದಾನ ಬಳಿಕೆಯ ಬಗ್ಗೆ ಪ್ರಧಾನ ವ್ಯವಸ್ಥಾಪಕರು, ಕೆಬಿಟ್ಸ್ ಸಂಸ್ಥೆ ಇವರಿಂದ (ಸಂಬಂಧಪಟ್ಟ ಗ್ರಾಮೀಣ ಬಿಪಿಓ ಕೇಂದ್ರಗಳಿಂದ ಉಪಯೋಗಿತಾ ದೃಢೀಕರಣ ಪತ್ರಗಳನ್ನು ವೆಚ್ಚ ಮಾಡಿದ ಅನುದಾನದ ವಿವರಗಳೊಂದಿಗೆ ಪಡೆದು) ಉಪಯೋಗಿತಾ ದೃಢೀಕರಣ ಪತ್ರವನ್ನು ವೆಚ್ಚ ಮಾಡಿದ ಅನುದಾನದ ವಿವರಗಳೊಂದಿಗೆ ಪಡೆದು) ಉಪಯೋಗಿತಾ ದೃಢೀಕರಣ ಪತ್ರವನ್ನು ವೆಚ್ಚ ಮಾಡಿದ ಅನುದಾನದ ವಿವರಗಳ ಜೊತೆಗೆ ಪಡೆದು ಸರ್ಕಾರಕ್ಕೆ ಒಗಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ ಆಇ: 57:ವೆಚ್ಚ 2:2010 ದಿನಾಂಕ: 11.2.2010 ರಲ್ಲಿನ ಸಹಮತಿಯ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ವಿ. ಕೃಷ್ಣಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ
ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ.

ಪಿ.ಆರ್. 2423

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ** : ಶ್ರೀ.ಕೆ.ಎಸ್.ಮಂಜುನಾಥ್, ಜವಳಿ ತನಿಖಾಧಿಕಾರಿ, ಕೈಮಗ್ಗ ಮತ್ತು ಜವಳಿ ಇಲಾಖೆ, ಬೆಂಗಳೂರು ನಗರ ಇವರಿಗೆ ಜವಳಿ ಪ್ರವರ್ಧನಾಧಿಕಾರಿ ಹುದ್ದೆಗೆ ಪೂರ್ವಾನ್ವಯವಾಗಿ ಮುಂಬಡ್ತಿ ನೀಡುವ ಬಗ್ಗೆ.

**ಓದಲಾಗಿದೆ** :
1) ಕೈಮಗ್ಗ ಮತ್ತು ಜವಳಿ ಇಲಾಖೆಯ ಜವಳಿ ತನಿಖಾಧಿಕಾರಿ ವೃಂದದಿಂದ ಜವಳಿ ಪ್ರವರ್ಧನಾಧಿಕಾರಿ ಹುದ್ದೆಗೆ ದಿನಾಂಕ:18.10.2008 ರಂದು ನಡೆದ ಇಲಾಖಾ ಬಡ್ತಿ ಸಮಿತಿ ಸಭೆಯ ನಡವಳಿ.
2) ಸರ್ಕಾರದ ಆದೇಶ ಸಂಖ್ಯೆ: ವಾಕೈ 21 ಜಕೈಯೋ 2005, ದಿನಾಂಕ: 06–03–2010.
3) ಕರ್ನಾಟಕ ಲೋಕಸೇವಾ ಆಯೋಗ ಪತ್ರ ಸಂಖ್ಯೆ ಪಿಎಸ್‌ಸಿ/73/ಸಿಎನ್‌ಎಸ್/10 ದಿನಾಂಕ: 15/7/2010
4) ಜವಳಿ ಅಭಿವೃದ್ಧಿ ಆಯುಕ್ತರು, ಕೈಮಗ್ಗ ಮತ್ತು ಜವಳಿ ಇಲಾಖೆ ಇವರ ಪತ್ರ ಸಂಖ್ಯೆ: ಕೈಜಇ/ಆಡಳಿತ.ಸಿ–1/50/09–10 ದಿ: 01–04–10.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ. (1) ರ ಇಲಾಖೆ ಮುಂಬಡ್ತಿ ಸಮಿತಿ ಸಭೆಯ ನಡವಳಿಯಲ್ಲಿ ಕೈಮಗ್ಗ ಮತ್ತು ಜವಳಿ ಇಲಾಖೆಯ 7 ಜನ ಜವಳಿ ತನಿಖಾಧಿಕಾರಿಗಳಿಗೆ ಜವಳಿ ಪ್ರವರ್ಧನಾಧಿಕಾರಿಗಳಾಗಿ ಸ್ಥಾನಪನ್ನ ಬಡ್ತಿ ನೀಡಲು ಪರಿಗಣಿಸಿ ಶ್ರೀ ಕೆ.ಎಸ್.ಮಂಜುನಾಥ್ ಇವರನ್ನು ಮುಂಬಡ್ತಿಗೆ ಅರ್ಹ ಎಂದು ಪರಿಗಣಿಸಿ ಇವರ ವಿರುದ್ಧ ಇಲಾಖಾ ವಿಚಾರಣೆ ಬಾಕಿ ಇರುವುದರಿಂದ ಇವರ ಮುಂಬಡ್ತಿಯ ತೀರ್ಮಾನವನ್ನು ಮೊಹರು ಲಕೋಟೆಯಲ್ಲಿಡಲಾಗಿತ್ತು.

ಓದಲಾದ ಕ್ರ.ಸಂ. (2)ರ ಸರ್ಕಾರದ ಆದೇಶದಲ್ಲಿ ಶ್ರೀಯುತರ ಮೇಲಿನ ಆರೋಪಗಳು ಸಾಬೀತಾಗಿಲ್ಲದ ಕಾರಣ ಸರ್ಕಾರವು ಇವರನ್ನು ದೋಷಮುಕ್ತರೆಂದು ಪರಿಗಣಿಸಿದೆ.

ಓದಲಾದ ಕ್ರ.ಸಂ. (3) ರಲ್ಲಿ ಕರ್ನಾಟಕ ಲೋಕಸೇವಾ ಆಯೋಗವು ಶ್ರೀಯುತರಿಗೆ ಜವಳಿ ತನಿಖಾಧಿಕಾರಿ ಹುದ್ದೆಯಿಂದ ಜವಳಿ ಪ್ರವರ್ಧನಾಧಿಕಾರಿ ಹುದ್ದೆಗೆ ದಿನಾಂಕ: 25–10–2008 ರಿಂದ ಪೂರ್ವಾನ್ವಯವಾಗಿ ಸ್ಥಾನಪನ್ನಾ ಬಡ್ತಿ ನೀಡಲು ಸಹಮಿತಿಯನ್ನು ನೀಡಿರುತ್ತದೆ. ಓದಲಾದ ಕ್ರ.ಸಂ. (4) ರಲ್ಲಿ ಜವಳಿ ಅಭಿವೃದ್ಧಿ ಆಯುಕ್ತರು, ಕೈಮಗ್ಗ ಮತ್ತು ಜವಳಿ ಇಲಾಖೆ ಇವರು ಶ್ರೀ ಕೆ.ಎಸ್.ಮಂಜುನಾಥ್ ಜವಳಿ ತನಿಖಾಧಿಕಾರಿ ಇವರಿಗೆ ದಿನಾಂಕ: 25–10–2008 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಜವಳಿ ಪ್ರವರ್ಧನಾಧಿಕಾರಿ ಹುದ್ದೆಗೆ ಸ್ಥಾನಪನ್ನಾ ಬಡ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಆದ್ದರಿಂದ ಈ ಸಂಬಂಧ ಕೂಲಂಕುಷವಾಗಿ ಪರಿಶೀಲಿಸಿದ ನಂತರ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ : ವಾಕೈ 21 ಜಕೈಸೇ 2010 ದಿನಾಂಕ : 16–09–2010**

ಶ್ರೀ ಕೆ.ಎಸ್.ಮಂಜುನಾಥ್, ಜವಳಿ ತನಿಖಾಧಿಕಾರಿ, ಕೈಮಗ್ಗೆ ಮತ್ತು ಜವಳಿ ಇಲಾಖೆ, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಇವರಿಗೆ ಕರ್ನಾಟಕ ರಾಜ್ಯ ಸಿವಿಲ್ ಸೇವಾ (ಮುಂಬಡ್ತಿ ವೇತನ ಮತ್ತು ಪಿಂಚಣಿ ಕ್ರಮಬದ್ಧತೆ) ನಿಯಮಗಳು 1978 ರ ನಿಯಮ 2(1) (ಎ) ರನ್ವಯ ದಿನಾಂಕ: 25–10–2008 ರಿಂದ ಪೂರ್ವಾನ್ವಯವಾಗಿ ಜವಳಿ ಪ್ರವರ್ಧನಾಧಿಕಾರಿ ಹುದ್ದೆಗೆ ವೇತನ ಶ್ರೇಣಿ ರೂ. 10,800–300–12300–350–14400–400–16800–450–19500–525–20025 ಸ್ಥಾನಪನ್ನಾ ಮುಂಬಡ್ತಿ ನೀಡಿ ಆದೇಶಿಸಲಾಗಿದೆ. ಅದರಂತೆ ಶ್ರೀಯುತರು ಜವಳಿ ಪ್ರವರ್ಧನಾಧಿಕಾರಿ ಹುದ್ದೆಗೆ ಸಂಬಂಧಿಸಿದ ಆರ್ಥಿಕ ಮತ್ತು ಇತರ ಎಲ್ಲಾ ಸೌಲಭ್ಯಗಳನ್ನು ಸಹ ದಿನಾಂಕ: 25–10–2008 ರಿಂದ ಪಡೆಯಲು ಅರ್ಹರಿರುತ್ತಾರೆ. ಶ್ರೀ ಕೆ.ಎಸ್.ಮಂಜುನಾಥ್ ರವರನ್ನು ಉಪ ನಿರ್ದೇಶಕರ ಕಛೇರಿ, ಕೈಮಗ್ಗ ಮತ್ತು ಜವಳಿ ಇಲಾಖೆ ಜಿಲ್ಲಾ ಪಂಚಾಯತ್, ಚಿಕ್ಕಬಳ್ಳಾಪುರ ಜಿಲ್ಲೆ ಇಲ್ಲಿ ಖಾಲಿ ಇರುವ ಜವಳಿ ಪ್ರವರ್ಧನಾಧಿಕಾರಿ ಹುದ್ದೆಗೆ ನೇಮಿಸಿ ಆದೇಶ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎಸ್. ಗಣಪತಿ**
ಸರ್ಕಾರದ ಉಪ ಕಾರ್ಯದರ್ಶಿ
(ಜವಳಿ,ಸಿ&ಸಿ ಮತ್ತು ಐ.ಆರ್)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

ಪಿ.ಆರ್.2424

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ಶ್ರೀ. ಜಿ.ಟಿ.ಕುಮಾರ್, ಜವಳಿ ಪ್ರವರ್ಧನಾಧಿಕಾರಿ, ಕೈಮಗ್ಗ ಮತ್ತು ಜವಳಿ ಇಲಾಖೆ, ಬೆಂಗಳೂರು ನಗರ ಇವರಿಗೆ ಸಹಾಯಕ ನಿರ್ದೇಶಕರ ಹುದ್ದೆಗೆ ಪೂರ್ವಾನ್ವಯವಾಗಿ ಮುಂಬಡ್ತಿ ನೀಡುವ ಬಗ್ಗೆ.

**ಓದಲಾಗಿದೆ :**

1) ಕೈಮಗ್ಗ ಮತ್ತು ಜವಳಿ ಇಲಾಖೆಯ ಜವಳಿ ಪ್ರವರ್ಧನಾಧಿಕಾರಿ ವೃಂದದಿಂದ ಸಹಾಯಕ ನಿರ್ದೇಶಕರ ಹುದ್ದೆಗೆ ದಿನಾಂಕ: 14.05.2007 ರಂದು ನಡೆದ ಇಲಾಖಾ ಬಡ್ತಿ ಸಮಿತಿ ಸಭೆಯ ನಡವಳಿ.
2) ಸರ್ಕಾರದ ಆದೇಶ ಸಂಖ್ಯೆ: ವಾಕೈ 21 ಜಕೈಯೋ 2005, ದಿನಾಂಕ: 06-03-2010.
3) ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ/62/ಸಿಎನ್/ ಎಸ್/10 ದಿನಾಂಕ: 09.07.2010.
4) ಜವಳಿ ಅಭಿವೃದ್ಧಿ ಆಯುಕ್ತರು, ಕೈಮಗ್ಗ ಮತ್ತು ಜವಳಿ ಇಲಾಖೆ ಇವರ ಪತ್ರ ಸಂಖ್ಯೆ: ಕೈಜಇ/ ಆಡಳಿತ.ಸಿ-4/43-ಮುಂಬಡ್ತಿ/09-10 ದಿ: 31.03.10, 08.04.10.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ. (1)ರ ಇಲಾಖಾ ಮುಂಬಡ್ತಿ ಸಮಿತಿ ಸಭೆಯ ನಡವಳಿಯಲ್ಲಿ ಕೈಮಗ್ಗ ಮತ್ತು ಜವಳಿ ಇಲಾಖೆಯ 9 ಜನ ಜವಳಿ ಪ್ರವರ್ಧನಾಧಿಕಾರಿಗಳಿಗೆ ಸಹಾಯಕ ನಿರ್ದೇಶಕರಾಗಿ ಸ್ಥಾನಾಪನ್ನ ಬಡ್ತಿ ನೀಡಲು ಪರಿಗಣಿಸಿದೆ. ಬಡ್ತಿಗೆ ಪರಿಗಣಿಸಲಾಗಿರುವ ಅಧಿಕಾರಿಗಳ ಪೈಕಿ ಜೇಷ್ಠತಾ ಪಟ್ಟಿಯ ಕ್ರಮ ಸಂಖ್ಯೆ: 6 ರಲ್ಲಿರುವ ಶ್ರೀ ಜಿ.ಟಿ.ಕುಮಾರ್ ಇವರನ್ನು ಮುಂಬಡ್ತಿಗೆ ಅರ್ಹ ಎಂದು ಪರಿಗಣಿಸಿ ಇವರ ವಿರುದ್ಧ ಇಲಾಖಾ ವಿಚಾರಣೆ ಬಾಕಿ ಇರುವುದರಿಂದ ಇವರ ಮುಂಬಡ್ತಿಯ ತೀರ್ಮಾನವನ್ನು ಮೊಹರು ಲಕೋಟೆಯಲ್ಲಿಡಲಾಗಿತ್ತು.

ಓದಲಾದ ಕ್ರ.ಸಂ. (2)ರ ಸರ್ಕಾರದ ಆದೇಶದಲ್ಲಿ ಶ್ರೀಯುತರ ಮೇಲಿನ ಆರೋಪಗಳು ಸಾಬೀತಾಗಿಲ್ಲದ ಕಾರಣ ಸರ್ಕಾರವು ಇವರನ್ನು ದೋಷಮುಕ್ತರೆಂದು ಪರಿಗಣಿಸಿದೆ.

ಕ್ರ.ಸಂ. (3)ರಲ್ಲಿ ಕರ್ನಾಟಕ ಲೋಕಸೇವಾ ಆಯೋಗವು ಶ್ರೀಯುತರಿಗೆ ಜವಳಿ ಪ್ರವರ್ಧನಾಧಿಕಾರಿ ಹುದ್ದೆಯಿಂದ ಸಹಾಯಕ ನಿರ್ದೇಶಕರ ಹುದ್ದೆಗೆ ದಿನಾಂಕ: 06.02.2008 ರಿಂದ ಪೂರ್ವಾನ್ವಯವಾಗಿ ಸ್ಥಾನಾಪನ್ನಾ ಬಡ್ತಿ ನೀಡಲು ಸಹಮತಿಯನ್ನು ನೀಡಿರುತ್ತದೆ. ಓದಲಾದ ಕ್ರ.ಸಂ (4)ರಲ್ಲಿ ಜವಳಿ ಅಭಿವೃದ್ಧಿ ಆಯುಕ್ತರು, ಕೈಮಗ್ಗ ಮತ್ತು ಜವಳಿ ಇಲಾಖೆ ಇವರು ಶ್ರೀ ಜಿ.ಟಿ.ಕುಮಾರ್ ಜವಳಿ ಪ್ರವರ್ಧನಾಧಿಕಾರಿ ಇವರಿಗೆ ದಿನಾಂಕ: 06.02.2008 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಸಹಾಯಕ ನಿರ್ದೇಶಕರ ಹುದ್ದೆಗೆ ಸ್ಥಾನಾಪನ್ನಾ ಬಡ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ. ಆದ್ದರಿಂದ ಈ ಸಂಬಂಧ ಕೂಲಂಕಷವಾಗಿ ಪರಿಶೀಲಿಸಿದ ನಂತರ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಾಕೈ 20 ಜಕೈಸೇ 2010 ದಿನಾಂಕ: 16-09-2010**

ಶ್ರೀ ಜಿ.ಟಿ. ಕುಮಾರ್, ಜವಳಿ ಪ್ರವರ್ಧನಾಧಿಕಾರಿ, ಕೈಮಗ್ಗ ಮತ್ತು ಜವಳಿ ಇಲಾಖೆ, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಇವರಿಗೆ ಕರ್ನಾಟಕ ರಾಜ್ಯ ಸಿವಿಲ್ ಸೇವಾ (ಮುಂಬಡ್ತಿ ವೇತನ ಮತ್ತು ಪಿಂಚಣಿ ಕ್ರಮಬದ್ದತೆ) ನಿಯಮಗಳು 1978 ರ ನಿಯಮ 2(1) (ಎ) ರನ್ವಯ ದಿನಾಂಕ: 06.02.2008 ರಿಂದ ಪೂರ್ವಾನ್ವಯವಾಗಿ ಸಹಾಯಕ ನಿರ್ದೇಶಕರ ಹುದ್ದೆಗೆ (ವೇತನ ಶ್ರೇಣಿ ರೂ.12000-300-12300-350-14400-400-16800-450-19500-525-22650) ಸ್ಥಾನಾಪನ್ನಾ ಮುಂಬಡ್ತಿ ನೀಡಿ ಆದೇಶಿಸಲಾಗಿದೆ. ಅದರಂತೆ ಶ್ರೀಯುತರು ಸಹಾಯಕ ನಿರ್ದೇಶಕರ ಹುದ್ದೆಗೆ ಸಂಬಂಧಿಸಿದ ಆರ್ಥಿಕ ಮತ್ತು ಇತರ ಎಲ್ಲಾ ಸೌಲಭ್ಯಗಳನ್ನು ಸಹ ದಿನಾಂಕ: 06.02.2008 ರಿಂದ ಪಡೆಯಲು ಅರ್ಹರಿರುತ್ತಾರೆ. ಶ್ರೀ. ಜಿ.ಟಿ.ಕುಮಾರ್‌ರವರನ್ನು ಕೇಂದ್ರ ಕಛೇರಿ, ಕೈಮಗ್ಗ ಮತ್ತು ಜವಳಿ ಇಲಾಖೆ, ಬೆಂಗಳೂರು ಇಲ್ಲಿ ಖಾಲಿಯಿರುವ ಸಹಾಯಕ ನಿರ್ದೇಶಕರು (ಆಡಳಿತ) ಹುದ್ದೆಗೆ ನೇಮಿಸಿ ಆದೇಶ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಗಣಪತಿ**

ಸರ್ಕಾರದ ಉಪ ಕಾರ್ಯದರ್ಶಿ

(ಜವಳಿ,ಸಿ&ಸಿ ಮತ್ತು ಐ.ಆರ್)

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

ಪಿ.ಆರ್. 2425

## FOREST, ECOLOGY AND ENVIRONMENT SECRETARIAT

**Sub :** Proposal for grant of permission to use the existing old over an area of 13.30 ha. of forest land of mining lease No. 1179 in favour of M/s Sandur Manganese & Iron Ore (SMIORE) Ltd., Sandur in SM & RM Block, Sandur Taluk, Bellary District of Karnataka.

**READ :**

1) Letter No. A5 (1) MNG. CR.60/06-07(Road), dated: 09-08-2006 of the Principal Chief Conservator of Forests, Bangalore.
2) State Government letter No.FEE 128 FFM 2006, dated 02-09-2006,
3) Governmnet of India Ministry of Environment and Forests, Paryavaran Bhavan, New Delhi letter No. F.No. 8-17/1994-FC, dated: 10-11-2008.
4) Letter No. A5 (1) MNG. CR. 60/06-07, dated: 01-06-2009 of the Principal Chief Conservator of Forests, Bangalore.
5) State Government letter No.FEE 85 FFM 2009, dated: 19-04-2010.
6) Government of India Ministry of Environment and Forests, Paryavaran Bhavan, New Delhi letter No. F.No. 8-17/1994-FC, dated: 05-05-2010.

**PREAMBLE :**

The Principal Chief Conservator of Forests had sent proposal vide his letter dated: 09-08-2006 read at (1) above for grant of permission to use the existing old road over an area of 13.30 ha. of forest land of mining lease No.1179 in favour of M/s Sandur Manganese and Iron Ore (SMIORE) Ltd., Sandur in SM & RM Block, Sandur Taluk, Bellary District of Karnataka subject to certain conditions.

The proposal of the Principal Chief Conservator of Forest was recommended to Government of India, Ministry of Environment and Forests New Delhi vide Government letter dated: 02-09-2006 read at (2) above seeking prior approval of Government of India under section 2 of Forest (Conservation) Act, 1980.

After careful consideration of the proposal of the State Government, Government of India vide its letter dated: 10-11-2008 read at (3) above has agreed in-principle subject to the fulfilment of certain conditions.

In compliance of the conditions stipulated by Government of India vide its letter dated: 10-11-2008, the Principal Chief Conservator of Forests vide his letter dated: 01-06-2009 read at (4) above has sent his compliance report. This compliance report was forwarded to Government of India vide State Government letter dated: 19-04-2010 read at (5) above.

Finally Government of India vide its letter dated: 05-05-2010 read at (6) above has conveyed its general approval under Section 2 of Forest (Conservation) Act, 1980 for grant of permission to use the existing old road over an area of 13.30 ha. of forest land of mining lease No. 1179 in favour of M/s Sandur Manganese and Iron are (SMIORE) Ltd, sandur in SM & RM Block Sandur Taluk, Bellary District of Karnataka subject to certain conditions. Hence the order.

**GOVT. ORDER NO.FEE 85 FFM 2009, BANGALORE DATED: 21/05/2010**

After examining all aspects of the matter and in view of the approval accorded to the proposal by Government of India, Ministry of Environment Forests, New Delhi, Government are pleased to accord its approval under Section 2 of Forest (Conservation) Act, 1980 for grant of permission to use the existing old road over an area of 13.30 ha. of forest land of mining lease No.1179 in favour of M/s Sandur Manganese & Iron Ore (SMIORE) Ltd., Sandur in SM & RM Block, Sandur Taluk, Bellary Destrict of Karnataka subject to the following conditions.

1. Legal status of forest land shall remain unchanged.
2. Compensatory Afforestation (CA) shall be raised and maintained by the State Forest Department on equivalent non-forest land as proposed at the Project cost. The land shall be mutated in favour of the State Forest Department.
3. The Non-forest land identified during 2006 for raising compensatory afforestation has already been notified as RF under Section 4 of the Karnataka Forest Act, 1963 vide in Notification No.FEE 95 FAF 2006, dated: 05-11-2007.
4. Whether possible and technically feasible the user agency shall undertake afforestation measures in the blanks within the diverted area, as well as along the roads outside the area diverted under this approval, in consultation with the State Forest Department at the project cost.
5. The additional amount of the NPV of the diverted forest land, if any, becoming due after finalisation of the same by the Hon'ble Supreme Court of India on receipt of the report from the Expert Committee, shall be charged by the State Government from the User Agency. The user agency shall furnish an undertaking to this effect.
6. Trees shall be felled only when it becomes necessary and that to under strict supervision of the State Forest Department and at the cost of the Project.
7. All efforts should be made for protection of flora and fauna of the adjoining forest area at the cost of the project. Steps may be taken to minimize biotic pressure over adjoining/nearby forests including encroachment on forest land with the help of the user agency.
8. No labour camps shall be established on forest land.
9. The user agency shall provides fuel wood preferably alternate fuel to the labourers working at the site to avoid damage/felling of trees.
10. The forest land shall not be used for any purpose other than that specified in the proposal
11. All the conditions proposed by the State Government of Karnataka at the time of submission of the proposal to the Central Government.
12. The right of use of the road to local people as existing shall be maintained.
13. Signage for the forest protection shall be used all along the road at the User Agencies cost in consultation with the State Forest Department.
14. Mitigative measures for impact of the project on human habitation to be undertaken at the cost of user agency.
15. Any other condition that the CCF (Central), Regional Office, Bangalore and the State Government may impose from time to time for the protection and Improvement of flora and fauna in the forest area.

16. All other conditions under different rules regulations and guidelines including environmental clearance and the Scheduled Tribes and other Traditional Forest Dwellers (Recognition of Forest Rights) Act, 2006 shall be complied with before transfer of the forest land.
17. The lease period is co-terminus with the lease period granted under the Forest (Conservation) Act, 1980.
18. The lessee shall pay usual lease rent and other charges as prescribed by the Govt. from time to time.
19. The lessee shall deposit the amount at prevailing rate (at present Rs. 94,000/-per ha.) towards raising of compensatory afforestation over 13.30 ha. in non-forest land and twice as a penal compensatory affore station in the degraded forest and Net Present Value (NPV) amount.
20. The lessee shall carryout soil and water conservation measures and other necessary measures around the road as advised by the Forest Department from time to time.
21. The lessee shall abide by all the conditions prescribed by Govt. of India and Govt. of Karnataka.
22. The lessee shall execute an agreement with the Forest Dept. binding himself to abide by all usual conditions and terms as per orders of the Govt. as well as Principal Chief Conservator of Forests.
23. The lessee shall take-up the planting work on the both side of the road at his cost and maintain continuously till the end of the lease period.
24. In case of violation of agreement conditions, the State Government (Department of Forests, Ecology and Environment) shall have right to suspend the mining activities.
25. The lessee shall fully reclaim the area 13.30 ha. before handing over to Forest Department.
26. The road should be mettled and proper drainage should be provided.
27. The Conservator of Forest is authorized under section 82 of Karnataka Forest Act, 1963 to forfeit the land if any violation is noticed.
28. The lessee shall convert the road into a Dammered road and maintain it at his cost till the end of lease period. Before expiry of lease period the lessee has to restore the road to its original from by removing the hard cover and planting with natural species.
29. If other user agencies are already using this existing road, there should not be any objection. Their right continues.
30. In future if necessity arises for any user agency to use the same road they should take permission as per the Forest (Conservation) Act. 1980 and its guidelines.

By Order and in the name of the Governor of Karnataka,

**H.M. MALLIKARJUNA SWAMY**

Under Secretary to Govt.

Forests, Ecology and Environment Department.

P.R. 2426

## FOREST, ECOLOGY AND ENVIRONMENT SECRETARIAT

**Sub :** Proposal for grant of permission to use the exisiting old road over an area of 5.92 ha. of forest land of mining lease No. 1952 in favour of M/s Sandur Manganese & Iron Ore (SMIORE) Ltd., Sandur in SM & RM Block, Sandur Taluk, Bellary District of Karnataka.

**READ :**

1) Letter No. A5 (1) MNG. CR.53/06-07(Road), dated: 09-08-2006 of the Principal Chief Conservator of Forests, Bangalore.
2) State Government letter No.FEE 129 FFM 2006, dated 02-09-2006.
3) Governmet of India Ministry of Environment and Forests, Paryavaran Bhavan, New Delhi letter No. F.No. 8-15/1994-FC, dated: 10-11-2008.
4) Letter No. A5 (1) MNG. CR.53/06-07, dated: 01-06-2009 of the Principal Chief Conservator of Forests, Bangalore.
5) State Government letter No.FEE 84 FFM 2009, dated: 13-04-2010.
6) Government of India Ministry of Environment and Forests, Paryavaran Bhavan, New Delhi letter No. F.No. 8-15/1994-FC, dated: 05-05-2010.

**PREAMBLE :-**

The Principal Chief Conservator of Forests had sent proposal vide his letter dated: 09-08-2006 read at (1) above for grant of permission to use the existing old road over an area of 5.92 ha. of forest land of mining lease No.1952 in favour of M/s Sandur Manganese and Iron Ore (SMIORE) Ltd., Sandur in SM & RM Block, Sandur Taluk, Bellary District of Karnataka subject to certain conditions.

The proposal of the Principal Chief Conservator of Forest was recommended to Government of India, Ministry of Environment and Forests, New Delhi vide Government letter dated: 02-09-2006 read at (2) above seeking prior approval of Government of India under section 2 of Forest (Conservation) Act, 1980.

